# ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಲಾಗುತ್ತಿರುವ ಎಂ.ಫಿಲ್. ಪ್ರಬಂಧ)


ಸಂಶೋಧನಾ ವಿದ್ಯಾರ್ಥಿ

ರಹಿಮಾನ್‌ಸಾಹೇಬ್. ಎಸ್

ನೋಂದಣಿ ಸಂಖ್ಯೆ : ೧೭೦೧೦೮೦೪೦೦೧೧

ಮಾರ್ಗದರ್ಶಕರು

ಡಾ. ಎಸ್. ವೈ. ಸೋಮಶೇಖರ್

ಸಹಾಯಕ ಪ್ರಾಧ್ಯಾಪಕರು





ಸಮಾಜ ವಿಜ್ಞಾನ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬


೨೦೧೭-೧೮

# ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಾದರಪಡಿಸುತ್ತಿರುವ ಎಂ.ಫಿಲ್. ಪ್ರೌಢಪ್ರಬಂಧ)



ಸಂಶೋಧನಾ ವಿದ್ಯಾರ್ಥಿ

**ರಹಿಮಾನ್‌ಸಾಹೇಬ್. ಎಸ್**

ನೋಂದಣಿ ಸಂಖ್ಯೆ : ೧೭೦೧೦೮೦೩೦೦೧೧

ಮಾರ್ಗದರ್ಶಕರು

**ಡಾ. ಎಸ್. ವೈ. ಸೋಮಶೇಖರ್**

ಸಹಾಯಕ ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ

**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೧೭-೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

ರಹಿಮಾನ್‌ಸಾಹೇಬ್. ಎಸ್ ಅವರು "ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನ" ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರೌಢಪ್ರಬಂಧವನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ

ಮಾರ್ಗದರ್ಶಕರು

೨೧/೦೮/೨೦೧೮

(ಡಾ. ಎಸ್.ವೈ. ಸೋಮಶೇಖರ್)

ದಿನಾಂಕ :

ಸ್ಥಳ : ವಿದ್ಯಾರಣ್ಯ

ಸಹಾಯಕ ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನ

## ಪರಿವಿಡಿ

# ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನ

## ಅಧ್ಯಾಯ–ಒಂದು

**ಪ್ರಸ್ತಾವನೆ**

ಭೂಮಿಯ ಮೇಲಿರುವ ಸಕಲ ಜೀವ ರಾಶಿಗಳಿಗೆ ಅಗತ್ಯವಾದ ಮೂಲ ವಸ್ತುಗಳಲ್ಲಿ ಗಾಳಿಯ ನಂತರದ ಸ್ಥಾನ 'ನೀರಿನದು'. ಇಡೀ ಜೀವ ಜಗತ್ತಿನ ಅಸ್ತಿತ್ವವು ನೀರಿನಿಂದ ನಿರ್ದೇಶಿಸಲ್ಪಡುತ್ತದೆ. ನೀರಿಲ್ಲದ ಮಾನವನ ಬದುಕನ್ನು ಊಹಿಸುವುದೂ ಅಸಾಧ್ಯ. ಮಾನವನ ಇಡೀ ಬದುಕು ನೀರಿನಿಂದ ಸುತ್ತುವರೆದಿದೆ. ಮಾನವ ಸಂಸ್ಕೃತಿಯ ವಿಕಾಸದಲ್ಲಿ 'ನೀರು' ಅಮೂಲ್ಯವಾಗಿದ್ದು, ಇದು ಜೀವಜಲವೂ ಹೌದು. ಈ ಹಿನ್ನೆಲೆಯಲ್ಲಿಯೇ ನೀರನ್ನು ಪಂಚಭೂತಗಳಲ್ಲಿ ಒಂದೆಂದು ಕರೆದಿರುವುದು. ಪ್ರಪಂಚದ ನಾಗರಿಕತೆಗಳು ಬೆಳೆದುದು ನೀರಿನ ತಾಣಗಳ ಆಸುಪಾಸಿನಲ್ಲಿ ಎಂಬುದು ತಿಳಿದುಬರುತ್ತದೆ. ಹೀಗಾಗಿಯೇ ಪ್ರಾಗಿತಿಹಾಸ ಕಾಲದ ಮಾನವನ ವಾಸದ ನೆಲೆಗಳು ನೀರಿರುವ ನೈಸರ್ಗಿಕ ತಾಣಗಳೇ ಆಗಿವೆ. ಅವು ನದಿ, ಸರೋವರ, ಹಳ್ಳಕೊಳ್ಳಗಳಾಗಿವೆ. ಈ ದಿಸೆಯಲ್ಲಿ ಮುನ್ನೆಡೆದು ಕೃತಕವಾಗಿ ನೀರನ್ನು ಸಂಗ್ರಹಿಸಿ ತನ್ನ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಲು ನಡೆಸಿದ ಪ್ರಯತ್ನಗಳ ಫಲಗಳೇ ಕೆರೆ, ಕಟ್ಟೆ, ಕುಂಟೆ, ಬಾವಿಗಳಾಗಿ ರೂಪತಾಳಿದವು.

ಇಂತಹ ಪ್ರಯತ್ನಗಳು ನೂತನ ಶಿಲಾಯುಗದ ಅಂತಿಮ ಕಾಲಕ್ಕಾಗಲೇ ವ್ಯಾಪಕವಾಗಿ ಬೆಳೆದು, ಮಾನವ ಒಂದೆಡೆ ನೆಲೆ ನಿಂತು ತನ್ನ ಜೀವನ ಸಾಗಿಸಲು ಪ್ರಾರಂಭಿಸಿದ. ಅರಸರು, ಅಧಿಕಾರಿಗಳು, ಸ್ಥಳೀಯರು ಮೊದಲಾದವರು ತಮ್ಮ ರಾಜ್ಯ, ಪ್ರದೇಶ, ಊರಿನ ಅಭಿವೃದ್ಧಿಯ ದೃಷ್ಟಿಯಿಂದ ನೀರಿನ ತಾಣಗಳಾದ ಕೆರೆ–ಬಾವಿ, ಕಟ್ಟೆ–ಕುಂಟೆಗಳನ್ನು ಅವಿಭಾಜ್ಯ ಅಂಗಗಳಾಗಿ ನಿರ್ಮಿಸಿರುವುದು ಕಂಡುಬರುತ್ತದೆ. ಅಂತೆಯೇ ಕೆರೆ, ಏರಿ, ಕಟ್ಟೆ, ಕೊಳ, ಕುಂಟೆ, ತೀರ್ಥ, ಡೋಣಿ ಇತ್ಯಾದಿ ಸೂಚಿಪದಗಳು ಜಲಾಶಯದ ಪ್ರತ್ಯಯಗಳಾಗಿ ಕಂಡುಬರುತ್ತವೆ.

ವೇದಗಳಲ್ಲಿ ನೀರಾವರಿಗೆ ಸಂಬಂಧಿಸಿದ ಅನೇಕ ಶಬ್ಧಗಳಿವೆ. ಉದಾ : 'ಬಾವಿ' (ಕೂಪ), 'ಕಾಲುವೆ' (ಕುಲ್ಯ) 'ಸರೋವರ' (ಸರಸಿ), ಎಂಬ ಪದಗಳು ಮಹಾಭಾರತದ ಅನುಶಾಸನಿಕ ಪರ್ವದಲ್ಲಿ ಕಂಡುಬರುತ್ತವೆ. ರಾಜನು ಮಾಡಬೇಕಾದ ಕರ್ತವ್ಯಗಳ ಬಗೆಗೆ ವಿವರವಿದೆ. ಅದರಲ್ಲಿ ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸುವಂತೆ ಹೇಳಲಾಗಿದೆ. ಅನೇಕ ಸಾಹಿತ್ಯ, ಪುರಾಣ, ಪ್ರಾಯೋಗಿಕ ಶಾಸ್ತ್ರ ಕೃತಿಗಳು,

ಭಾರತದ ಅತ್ಯಂತ ಪ್ರಾಚೀನ ಸಾಹಿತ್ಯವಾದ ವೇದಗಳು, ಮನುಧರ್ಮಶಾಸ್ತ್ರಗಳಲ್ಲಿ ಕೆರೆ ಬೇಸಾಯ ಪದ್ಧತಿ ನಾಲೆಗಳ ವಿವರವಿದೆ.

ಬಹು ಹಿಂದಿನಿಂದಲೂ ಕೆರೆ ನಿರ್ಮಿಸಿದವರಿಗೆ ಅದೇ ಪ್ರದೇಶದಲ್ಲಿ ಭೂದಾನ ನೀಡುವ ಪದ್ಧತಿಯಿತ್ತು. ಈ ರೀತಿ ನೀಡಿದ ಭೂದಾನಗಳು ಆ ಕೆರೆಯನ್ನು ಕಟ್ಟುವುದಕ್ಕೆ ತಗಲುವ ವೆಚ್ಚಕ್ಕೆ ಸಮವಾಗಿ ಕಂಡುಬರುತ್ತಿದ್ದವು. ಅಂದು ಕೆರೆ, ಬಾವಿ ಕಟ್ಟಿಸುವುದು ಪುಣ್ಯದ ಕೆಲಸವೆಂಬ ಭಾವನೆ ಜನರಲ್ಲಿತ್ತು.

ಕ್ರಿ.ಶ. ೧೪೧೧ರ ಹಂಪೆಯ ಶಾಸನದಲ್ಲಿ

"ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಂ ಮಾಡಿಸ
ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ
ರ್ಗ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಯಿಂತೆಲ್ಲವಂ ಪಿಂದೆ ತಾ
ಯೆರೆದಳ್ವಾಲೆರೆವಂದು ತೊಟ್ಟು ಕಿವಿಯೊಳ್ಂ ಲಕ್ಷೀಧರಾಮಾತ್ಯನಾ"

ಈ ಮೇಲೆ ಉಲ್ಲೇಖಿಸಿದ ಪದ್ಯವನ್ನು ವಿಜಯನಗರದ ಅರಸ ಪ್ರೌಢ ದೇವರಾಯನ (ಕ್ರಿ.ಶ. ೧೪೦೬-೧೪೨೨) ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಲನ್ನು ಕುಡಿಸುವಾಗ ಮಗುವಿನ ಕಿವಿಯಲ್ಲಿ ಅತ್ಯಂತ ಮಹತ್ವದ ಸಾಮಾಜಿಕ ಹಿತವುಳ್ಳ ಮಹೋನ್ನತ ಕ್ರಿಯೆಗಳನ್ನು ಮಾಡು ಎಂದು ಸೂಚಿಸುತ್ತಾಳೆ. ಅದುವೇ ಕೆರೆ, ಬಾವಿ, ದೇವಾಗಾರವನ್ನು ಮಾಡಿಸು ಎಂಬುದು ಅಲ್ಲದೆ ಸಂಕಟದಲ್ಲಿ ಸಿಲುಕಿದ ಅನಾಥರನ್ನು ಬಿಡಿಸು. ಗೆಳೆಯರಿಗೆ ಉತ್ತಮವಾದುದನ್ನು ಮಾಡು ನಂಬಿದವರಿಗೆ ನೆರವಾಗು ಒಳ್ಳೆಯವರನ್ನು ರಕ್ಷಿಸು ಎಂದು ಹೇಳಿದೆ. ಇಂತಹ ಮಾನವೀಯ ಮೌಲ್ಯಗಳನ್ನು ಹೂವಿನ ಹಡಗಲಿಯ ಶಾಸನಗಳಲ್ಲೂ ಕಂಡುಬರುವಂತೆ ತೂಬು, ಕೋಡಿ ಮತ್ತು ಕಾಲುವೆಗಳ ಉಲ್ಲೇಖಗಳು ಕೆರೆ ನೀರಾವರಿಗಳಿಗೆ ಸಂಬಂಧಿಸಿದಂತೆ ಕೆರೆ ನಿರ್ಮಾಣದ ಉದ್ದೇಶ ವ್ಯವಸಾಯ ಸಂಬಂಧಿಯಾಗಿತ್ತು. ಕೆರೆಯನ್ನು ನಿರ್ಮಾಣ ಮಾಡಬೇಕಾದರೆ ಕೆಲವೊಂದು ತಂತ್ರಗಳನ್ನು ಉಪಯೋಗಿಸುತ್ತಿದ್ದರು. ಅವರ ಪ್ರಮುಖ ಅಂಶಗಳೆಂದರೆ, ಸ್ಥಳಗಟ್ಟಿಯಾಗಿರಬೇಕು. ಮಳೆನೀರು ಇಳಿಜಾರಿನಲ್ಲಿ ಇಳಿದು ಬರುವ ಪ್ರದೇಶವಾಗಿರಬೇಕು. ಅದಕ್ಕೆ ಹೊಂದಿಕೊಂಡಂತೆ ನೀರನ್ನು ಉಪಯೋಗಿಸಲು ಕೃಷಿಭೂಮಿ ಇರಬೇಕಾಗಿತ್ತು. ಇವು ಜನವಸತಿಯಿಂದ ದೂರವಿದ್ದರೂ ಸುತ್ತಮುತ್ತಲಿನ ಸ್ವಾಭಾವಿಕ ಸವಲತ್ತುಗಳನ್ನು ಬಳಸಿಕೊಂಡು ಮತ್ತು ನೀರನ್ನು ಬಳಸಲು ಬರುವಂತೆ ಕೆರೆ ನಿರ್ಮಾಣವಾಗಿರುವುದನ್ನು ಗಮನಿಸಬಹುದು. ಪ್ರಾಚೀನ ಕಾಲದಲ್ಲಿ ಕೆರೆಗಳು ಕುಡಿಯುವ ನೀರಿನ ಮೂಲಗಳಾಗಿದ್ದವು. ಹಡಗಲಿ ತಾಲೂಕು ಬಹುಪಾಲು ಬೆಟ್ಟ, ಹಳ್ಳ ಮತ್ತು ಏರು ತಗ್ಗುಗಳಿಂದ

ಕೂಡಿದ ಸಂಪದ್ಭರಿತ ಮಲ್ಲಿಗೆ ನಾಡಾಗಿದ್ದು ತಾಲೂಕಿನಾದ್ಯಾಂತ ಕೃಷಿಗೆ ದನಕರುಗಳಿಗೆ ಮತ್ತು ಜನರಿಗೆ ಅನುಕೂಲವಾಗುವಂತೆ ನೂರಾರು ಕೆರೆಗಳು ನಿರ್ಮಾಣಗೊಂಡಿವೆ.

ಕೆರೆಯ ಆಸರೆ ಎಷ್ಟು ಔಚಿತ್ಯ ಎಂದರೆ ಅದು ಫ್ರೆಂಚ್ ಇತಿಹಾಸಕಾರ "ಫುಕೋಯಾನ" ಇತ್ತೀಚಿನ ಉದ್ಗಾರ "ಇತಿಹಾಸದ ಅಂತ್ಯ" "end of history" ಗಿಂತಲೂ, ಭಾರತದ ಅಂತರಾಷ್ಟ್ರೀಯ ಅಣು ಒಪ್ಪಂದಕ್ಕಿಂತಲೂ, ಚಂದ್ರಯಾನಕ್ಕಿಂತಲೂ, ಮಹಾಸ್ಫೋಟ ಪ್ರಯೋಗಕ್ಕಿಂತಲೂ, ರಿಯೋ ಪೃಥ್ವಿ ಶೃಂಗಸಭೆ ನಡಾವಳಿಗಿಂತಲೂ ಹೆಚ್ಚು ಪ್ರಸ್ತುತವಾದದ್ದು "ಕೆರೆ ನೀರಾವರಿ" ಕಾರಣ ಇವೆಲ್ಲಾ ಒಂದಾಗಿ ಉಳಿಸಲಾಗದು. ಆತ್ಮಹತ್ಯೆಗೆ ಶರಣಾಗುತ್ತಿರುವ ರೈತರ ಪ್ರಾಣವನ್ನು ಉಳಿಸಲಾಗದು. ಆದರೆ ಕೆರೆ ನೀರಾವರಿ ವ್ಯವಸ್ಥಿತವಾಗಿ ಪುನರುಜ್ಜೀವನಗೊಂಡರೆ ರೈತರ ಹತ್ಯೆ ನಿಲ್ಲುತ್ತದೆ. ಕೆರೆ ನೀರಾವರಿ ರೈತನನ್ನು ಕಾಪಾಡಬಲ್ಲದು. ಅದರ ಬಹುಮುಖ ಉಪಯೋಗಗಳನ್ನು ಸಾಮಾಜಿಕ, ಧಾರ್ಮಿಕ, ಮಹತ್ವವನ್ನು ಈ ಪ್ರೊತ್ತಿಗೆ ನೋಡಬಹುದಾಗಿದ್ದು 'ಕೆರೆ' ಜನಪದ ಕೃತಿಯಲ್ಲಿ ಒಂದು ಪವಿತ್ರ ಸ್ಥಾನ ಪಡೆದುಕೊಂಡಿದೆ. ಬಹು ಉಪಯೋಗಿ ಕೆರೆ ತನ್ನ ಸುತ್ತಲೂ ಸಾಂಸ್ಕೃತಿಕ ಪರಧಿಯೊಂದನ್ನು ಧಾರ್ಮಿಕ ಸಂಬಂಧಗಳನ್ನು ಹಾಗೂ ಆರ್ಥಿಕ ಮೂಲಗಳನ್ನು ನಿರ್ಮಿಸಿಕೊಡುತ್ತದೆ.

**ಅಧ್ಯಯನದ ಉದ್ದೇಶ**

ಪ್ರಸ್ತುತ ಅಧ್ಯಯನದ ವಿಷಯ "ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನ" ಇದರಲ್ಲಿ ಕೆರೆಗಳ ಪ್ರಾಮುಖ್ಯತೆಯನ್ನು ತಿಳಿಯಲು ಹಲವಾರು ಶಾಸನಗಳನ್ನು ಬಳಸಿಕೊಳ್ಳಲಾಗಿದೆ. ಶಾಸನಗಳ ಆಧಾರದ ಮೇಲೆ ಕೆರೆಗಳ ಕುರಿತು ಸಮಗ್ರವಾದ ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಪ್ರಯತ್ನವನ್ನು ಮಾಡಲಾಗಿದೆ.

ಹೂವಿನ ಹಡಗಲಿ ತಾಲೂಕಿನಲ್ಲಿ ಸಣ್ಣ ಮತ್ತು ದೊಡ್ಡ ಪ್ರಮಾಣದ ಕೆರೆಗಳು ಸಾಕಷ್ಟು ಇದ್ದು ಅವು ಮೇಲುಸ್ತುವಾರಿ ರಹಿತವಾಗಿವೆ. ಸಂಪ್ರದಾಯ, ಆಚರಣೆಗಳು ಕಣ್ಮರೆಯಾಗಿರುವುದರಿಂದ ಇವುಗಳ ಸಂರಕ್ಷಣೆಯಲ್ಲಿ ಕುಂಠಿತವಾಗಿದೆ. ಇತ್ತೀಚೆಗೆ ಸರ್ಕಾರ ಹಳೆಯ ಕೆರೆಗಳನ್ನು ಜೀರ್ಣೋದ್ಧಾರ ಮಾಡಲು ಅನೇಕ ಯೋಜನೆಗಳನ್ನು ರೂಪಿಸಿದೆ. ಆದರೆ ಈ ಪ್ರಯತ್ನಗಳು ಸಾಕಷ್ಟು ಪರಿಣಾಮಕಾರಿಯಾಗಿ ಆಗುತ್ತಿಲ್ಲ. ಹಿಂದೆ ಕೆರೆ ನಿರ್ಮಾಣ, ಕೆರೆಗಳ ಮೇಲುಸ್ತುವಾರಿ "ಗ್ರಾಮ ಸಮಿತಿ"ಯದಾಗಿತ್ತು. ಕೆರೆಯನ್ನು ನಿರ್ಮಿಸಿದವರಿಗೆ ಕೆರೆಯ ಅಚ್ಚುಕಟ್ಟಿನಲ್ಲಿ ಭೂಮಿ ಪ್ರತಿಫಲವಾಗಿ ಸಿಗುತ್ತಿತ್ತು. ಕೃಷಿ ಕಾರ್ಮಿಕರಿಗೆ ತೃಪ್ತಿಕರವಾಗುವಂತೆ ಗ್ರಾಮ ಸಮುದಾಯ ತನ್ನ ಅಧಿಕಾರಿಗಳ ಮೂಲಕ ನೀರನ್ನು ಸಮರ್ಪಕವಾಗಿ

ಹಂಚುತ್ತಾ ತಾಲೂಕಿನ ಕೆರೆಗಳ ನೀರಾವರಿ ವ್ಯವಸ್ಥೆ, ಅವುಗಳ ಸ್ಥಿತಿಗತಿ, ಕೆರೆಗಳ ರಚನೆ, ಜೀರ್ಣೋದ್ಧಾರ, ಕೆರೆ ನಿರ್ವಹಣೆ ಮುಂತಾದುವನ್ನು ತಿಳಿಯುವುದು ಮುಖ್ಯವಾಗಿದೆ.

ಕೆರೆಗೆ ಸಂಬಂಧಿಸಿದಂತೆ ಕೆಲವು ಮುಖ್ಯ ಭಾಗಗಳಾದ ಏರಿ ನಿರ್ಮಾಣ, ತೂಬುಗಳ ರಚನೆ, ಕಾಲುವೆ ಮತ್ತು ಕೋಡಿಗಳ ರಚಿಸುವಲ್ಲಿ ಅಳವಡಿಸಿಕೊಂಡ ತಾಂತ್ರಿಕತೆ ಗುರುತಿಸುವುದು, ಹಾಗೆಯೇ ಯಾವುದೇ ಒಂದು ಉದ್ದೇಶದಿಂದ ನಿರ್ಮಾಣವಾದ ಕೆರೆ ಆ ಪ್ರದೇಶದ ಸ್ಥಳನಾಮವನ್ನು ನಿರ್ದೇಶಿಸುವಲ್ಲಿ ಬೀರಿದ ಪ್ರಭಾವವನ್ನು ಗುರುತಿಸುವುದು. ಕೆರೆಗಳ ಜೊತೆಗೆ ಹೊಂದಿಕೊಂಡಂತೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆಗಳು ಯಾವುವು? ಹಾಗೆಯೇ ಕೆರೆಗಳನ್ನು ನಿರ್ಮಾಣ ಮಾಡಿದ ನಂತರ ಅದರ ಉದ್ದೇಶ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ? ಎಂಬುದನ್ನು ತಿಳಿಯುವುದು ಮುಖ್ಯ.

ಹೂವಿನಹಡಗಲಿ ತಾಲೂಕಿನ ಕೆರೆಗಳು ಕೆವಲ ಅವಶೇಷವಾಗಿ ಉಳಿಯದೇ ವಿಶೇಷವಾಗಿ ಮುಂದಿನ ಪೀಳಿಗೆಗೂ ಸದುಪಯೋಗವಾಗಲಿ ಎಂಬುದೇ ಈ ಅಧ್ಯಯನದ ಉದ್ದೇಶ. ಹಿಂದೆ ಜನರು ಕೆರೆಗಳ ನೀರನ್ನು ಉಪಯೋಗ ಪಡೆದುಕೊಳ್ಳುತ್ತಿದ್ದರು. ಆದರೆ ಇತ್ತೀಚೆಗೆ ಅವುಗಳ ಕಣ್ಮರೆಯಾಗಲು ಕಾರಣಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಹೂವಿನಹಡಗಲಿ ತಾಲೂಕಿನಲ್ಲಿ ಕಂಡುಬರುವ ನೀರಾವರಿ ಮೂಲಗಳಾದ ಕೆರೆ-ಕಟ್ಟೆ, ಬಾವಿ, ಕಾಲುವೆಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಹೂವಿನ ಹಡಗಲಿ ತಾಲೂಕಿನ ಕೆರೆಗಳು ಕೇವಲ ಅವಶೇಷವಾಗಿ ಉಳಿಯದೇ ವಿಶೇಷವಾಗಿ ಮುಂದಿನ ಪೀಳಿಗೆಗೂ ಸಮಪಯೋಗವಾಗಲಿ ಎಂಬುದೇ ಈ ಅಧ್ಯಯನದ ಉದ್ದೇಶವಾಗಿದೆ. ದಕ್ಷಿಣ ಭಾರತದಲ್ಲಿ ಒಣ ಪ್ರದೇಶವೇ ಹೆಚ್ಚಾಗಿದ್ದು ನೀರಿನ ಸಂಗ್ರಹದ ಅವಶ್ಯಕತೆ ಹೆಚ್ಚಾಗಿರುವುದರಿಂದ ಇಲ್ಲಿಯ ಕೆರೆಗಳು ಹೆಚ್ಚಾಗಿ ಕಂಡುಬರುತ್ತವೆ. ಇತ್ತೀಚಿನ ದಿನಗಳಲ್ಲಿ ಕೆರೆಗಳು ರಕ್ಷಣೆ ಇಲ್ಲದೆ ಶಿಥಿಲವಾಗುತ್ತಿರುವುದನ್ನು ಕಾಣುತ್ತೇವೆ.

**ಅಧ್ಯಯನದ ವ್ಯಾಪ್ತಿ**

ಒಂದು ದೇಶದ ಇತಿಹಾಸ ಕುರಿತು ಅಧ್ಯಯನ ಮಾಡಬೇಕಾದರೆ ಅದು ತನ್ನದೇ ಆದ ವ್ಯಾಪ್ತಿ, ಮಿತಿಗಳನ್ನು ಅವಲಂಬಿಸಿರುತ್ತದೆ. ಅದೇ ರೀತಿ ಪ್ರಸ್ತುತ ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನದ ವ್ಯಾಪ್ತಿಯನ್ನು ಹೂವಿನ ಹಡಗಲಿ ತಾಲೂಕಿಗೆ ಮಾತ್ರ ಸಿಮೀತಗೊಳಿಸಲಾಗಿದೆ. ಅದರೊಂದಿಗೆ ಪ್ರಾಚೀನ ಕಾಲದಿಂದ ಇತ್ತೀಚಿನವರೆಗಿನ ಕೆರೆಗಳ ನಿರ್ಮಾಣ ಕುರಿತು ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಇದರ ವ್ಯಾಪ್ತಿಯಲ್ಲಿ ೩೫೫ಕ್ಕೂ ಹೆಚ್ಚು ಕೆರೆಗಳು ಕಂಡುಬರುತ್ತವೆ. ತಲಸ್ಪರ್ಶಿ ಅಧ್ಯಯನದ ದೃಷ್ಟಿಯಿಂದ ತಾಲೂಕಿನಾದ್ಯಾಂತ ಹರಡಿರುವ ಪ್ರಮುಖ ಕೆರೆಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಅಧ್ಯಯನದ ವ್ಯಾಪ್ತಿ ಕೇವಲ ಕೆರೆಗಳಿಗೆ ಮಾತ್ರ ಸೀಮಿತವಾಗಿರದೇ ಕೃಷಿ ನೀರಿನ ಬಳಕೆ, ಬೆಳೆಗಳು ಹಾಗೂ ಸಾಂಸ್ಕೃತಿಕ ನಂಬಿಕೆ ಆಚರಣೆಗಳನ್ನು ತಿಳಿಯುವ ಪ್ರಯತ್ನವನ್ನು ಹೊಂದಿದೆ.

**ಅಧ್ಯಯನದ ಸಮೀಕ್ಷೆ**

ಇದುವರೆಗೆ ಹಲವು ವಿದ್ವಾಂಸರು ಮತ್ತು ಸಂಶೋಧಕರು ತಮ್ಮ ಅಧ್ಯಯನದ ಪರಿಮಿತಿಯಲ್ಲಿ ಹೂವಿನ ಹಡಗಲಿ ತಾಲೂಕಿನ ಕುರಿತು ಕೆಲವು ಗ್ರಂಥ, ಲೇಖನ, ಪ್ರಬಂಧಗಳನ್ನು ಸಾದರಪಡಿಸಿರುತ್ತಾರೆ. ಕೆರೆ–ಬಾವಿಗಳ ಕುರಿತು ಇಡೀ ಕರ್ನಾಟಕವನ್ನೊಳಗೊಂಡಂತೆ ಅಧ್ಯಯನಗಳು ನಡೆದಿವೆ. ಆದರೆ ಹೂವಿನ ಹಡಗಲಿ ತಾಲೂಕಿನ ಚಾರಿತ್ರಿಕ ಅಧ್ಯಯನಗಳು ಈವರೆಗೆ ನಡೆದಿರುವುದಿಲ್ಲ.

ಕುಪ್ಪುಸ್ವಾಮಿಯವರು "Tank of Irrigation in Karnataka historical serve"ಎಂಬ ಕೃತಿಯಲ್ಲಿ ಕರ್ನಾಟಕದ ಪ್ರಮುಖ ಕೆರೆಗಳನ್ನು ಮಾತ್ರ ಉಲ್ಲೇಖಿಸಿದ್ದಾರೆ.

ಸಿ.ಟಿ.ಎಂ. ಕೊಟ್ರಯ್ಯನವರು(ಮೂಲ) ಧ್ರುವನಾರಾಯಣ ಎಂ(ಕನ್ನಡ ಅನು) 'ವಿಜಯನಗರ ಸಾಮ್ರಾಜ್ಯ ನೀರಾವರಿ ವ್ಯವಸ್ಥೆ' ಎಂಬ ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿನ ಕೆರೆ–ಬಾವಿ, ಕಾಲುವೆಗಳನ್ನು ಉಲ್ಲೇಖಿಸುತ್ತ ಕೆರೆಗಳನ್ನು ಕಟ್ಟುವ ಉದ್ದೇಶ, ಭೌಗೋಳಿಕ ಪರಿಸರದ ಹಿನ್ನಲೆ, ಕೆರೆಗಳನ್ನು ಕಟ್ಟುವಲ್ಲಿ ಮುಂದಾದ ರಾಜರು, ಗ್ರಾಮಗಳ ಸ್ಥಾನಿಕಾಧಿಕಾರಿಗಳು, ದಂಡನಾಯಕರ ಬಗ್ಗೆ ಶಾಸನಾಧಾರಗಳ ಮೂಲಕ ಪರಿಚಯಿಸಿದ್ದಾರೆ.

ಜಿ.ಎಸ್.ದೀಕ್ಷಿತ್ ಮತ್ತು ಜಿ.ಆರ್. ಕುಪ್ಪಸ್ವಾಮಿ., ಎಸ್. ಕೆ.ಮೋಹನ (ಅನು) ನೀಲತ್ತಹಳ್ಳಿ ಕಸ್ತೂರಿ, 'ಕರ್ನಾಟಕದಲ್ಲಿ ಕೆರೆ ನೀರಾವರಿ' ಎಂಬ ಗ್ರಂಥದಲ್ಲಿ ಪ್ರಾಚೀನ ಕಾಲದಿಂದ ಬ್ರಿಟಿಷರ ಆಡಳಿತದ ವರೆಗಿನ ಕೆರೆಗಳ ಸಂರಕ್ಷಣೆ, ಜಲ ನಿರ್ವಹಣೆ ಮತ್ತು ಹಣಕಾಸು ಎಂಬಿತ್ಯಾದಿ ಮಹತ್ವದ ಅಂಗಗಳನ್ನು ಕುರಿತು ಚರ್ಚಿಸಲಾಗಿದೆ. ಕರ್ನಾಟಕ ಸರ್ಕಾರ ರಚಿಸಿರುವ 'ಬಳ್ಳಾರಿ ಜಿಲ್ಲೆಯ ಗ್ಯಾಜೆಟಿಯರ್"ನಲ್ಲಿ ಇಲ್ಲಿನ ಕೆಲವು ಐತಿಹಾಸಿಕ ಸ್ಥಳ, ರಾಜಮನೆತನಗಳ ಬಗ್ಗೆ ವಿವರವನ್ನು ನೀಡುತ್ತದೆ. ರಾಜಾರಾಮ ಹೆಗಡೆಯವರು "ಕೆರೆ ನೀರಾವರಿ ಚರಿತ್ರೆಯ ಅಧ್ಯಯನ" ಎಂಬ ಗ್ರಂಥದಲ್ಲಿ ಕೆರೆಗಳ ಬಗ್ಗೆ ವಿವರವಾದ ಮಾಹಿತಿಯನ್ನು ನೀಡಿದ್ದಾರೆ.

ಮುನಿರಾಜಪ್ಪನವರು ಸಂಪಾದಿಸಿರುವ ಕರ್ನಾಟಕದಲ್ಲಿ ಕೆರೆ ನೀರಾವರಿ ಎಂಬ ಗ್ರಂಥದಲ್ಲಿ ಕರ್ನಾಟಕದಲ್ಲಿ ಕಂಡುಬರುವ ಪ್ರಮುಖ ಕೆರೆಗಳ ಸಂಕ್ಷಿಪ್ತ ಚಿತ್ರಣವನ್ನು ನೀಡಿದ್ದಾರೆ.

ಸಿ.ಎಸ್. ವಾಸುದೇವನ್ ಅವರ 'ಹಂಪಿ ಪರಿಸರದ ಕೆರೆಗಳು' ಎಂಬ ಪ್ರಕಟಿತ ಗ್ರಂಥದಲ್ಲಿ ಪ್ರಾಚೀನ ಭಾರತದಲ್ಲಿ ಕೆರೆ ನೀರಾವರಿ ಪದ್ಧತಿಯೊಂದಿಗೆ ವಿಜಯನಗರ ಕಾಲದಲ್ಲಿದ್ದ ಕೆರೆ ನೀರಾವರಿ ಪದ್ಧತಿ ಹಾಗೂ ಹೊಸಪೇಟೆ ತಾಲೂಕಿನ ವಿಜಯನಗರ ಕಾಲದಲ್ಲಿ ಕಂಡುಬರುವ ತೆರಿಗೆ ಪದ್ಧತಿ, ಕೆರೆಕಟ್ಟಲು ಇದ್ದ ನಂಬಿಕೆ, ಆಚರಣೆಗಳನ್ನು ಕುರಿತು ಚರ್ಚಿಸುತ್ತಾ ಬಳ್ಳಾರಿ ಜಿಲ್ಲೆಯ ಕೆರೆಯ ಅಧಿದೇವತೆಯಾಗಿ ಪೂಜೆಗೊಳ್ಳುವ ಕನ್ನೀರಮ್ಮನ ಬಗ್ಗೆ ಸಂಕ್ಷಿಪ್ತವಾದ ವಿವರಣೆಯನ್ನು ನೀಡಿದ್ದಾರೆ.

ಚನ್ನಬಸಪ್ಪ. ಎಸ್. ಪಾಟೀಲ ಮತ್ತು ವಿನೋದ ಪಾಟೀಲ ಸಂಪಾದಿಸಿರುವ "ಬಳ್ಳಾರಿ ಜಿಲ್ಲೆಯ ಶಾಸನ ಸೂಚಿಯಲ್ಲಿ ಬಳ್ಳಾರಿ ಜಿಲ್ಲೆಯ ಅನೇಕ ಶಾಸನಗಳನ್ನು ಹೊರತಂದಿದ್ದಾರೆ. ಕನ್ನಡ ವಿಶ್ವವಿದ್ಯಾಲಯವು ಹೊರತಂದಿರುವ "ಕನ್ನಡ ವಿಶ್ವವಿದ್ಯಾಲಯದ ಶಾಸನ ಸೂಚಿ-೧ ರಲ್ಲಿ ಬಳ್ಳಾರಿ ಜಿಲ್ಲೆಯ ಈ ಭಾಗದ ಶಾಸನಗಳನ್ನು ಪ್ರಕಟಿಸಲಾಗಿದೆ.

ಕರುಣಂ ವಿರುಪಾಕ್ಷಗೌಡರು "ಹೂವಿನ ಹಡಗಲಿ ತಾಲೂಕಿನ ಶಾಸನಗಳ ಸಮಗ್ರ ಅಧ್ಯಯನ" ಎಂಬ ಗ್ರಂಥದಲ್ಲಿ ಹೂವಿನ ಹಡಗಲಿ ತಾಲೂಕಿನಲ್ಲಿರುವ ಶಾಸನಗಳ ಬಗ್ಗೆ ವಿವರವಾದ ಮಾಹಿತಿಯನ್ನು ನೀಡಿದ್ದಾರೆ. ಎ.ನಾಗವೇಣಿಯವರ "ಹೂವಿನ ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳು ಅಧ್ಯಯನ ಎಂಬ ಪ್ರಬಂಧದಲ್ಲಿ ಹೂವಿನ ಹಡಗಲಿ ತಾಲೂಕಿನಲ್ಲಿ ಕಂಡುಬರುವ ಶಾಸನಗಳು, ದೇವಾಲಯಗಳ ಬಗ್ಗೆ ಅದರ ಜೊತೆಯಲ್ಲಿ ಇರುವುದನ್ನು ಕಾಣುತ್ತೇವೆ. ಶಂಕ್ರಪ್ಪ ಬಡಿಗೇರ ಅವರ "ಗದಗ ಜಿಲ್ಲೆಯ ಕೆರೆ-ಬಾವಿಗಳ ಚಾರಿತ್ರಿಕ ಅಧ್ಯಯನ" ಎಂಬ ಪ್ರಬಂಧದಲ್ಲಿ ಕೆರೆಗಳ ಬಗ್ಗೆ ಸಂಪೂರ್ಣವಾದ ಮಾಹಿತಿಯನ್ನು ನೀಡಿದ್ದಾರೆ. ಹನುಮಂತಪ್ಪ ಬಾ ಗಾಳನಾಯ್ಕರ ರವರ "ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನ" ಎಂಬ ಸಂಪ್ರಬಂಧದಲ್ಲಿ ಕೆರೆಗಳ ಬಗ್ಗೆ ಸಂಕ್ಷಿಪ್ತವಾದ ಮಾಹಿತಿಯನ್ನು ನೀಡಿದ್ದಾರೆ. ೧೯೯೨ ರಲ್ಲಿ ರಚನೆಯಾದ "ಕರ್ನಾಟಕ ಇತಿಹಾಸ ದರ್ಶನ"ದಲ್ಲಿ ಜಿ.ಎಸ್. ದೀಕ್ಷಿತ್ ಅವರು ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆಯ ಅವಶ್ಯಕತೆ' ಎಂಬ ಲೇಖನದಲ್ಲಿ ಕೆರೆಗಳ ನಿರ್ವಹಣೆಯ ಕುರಿತು ಮಾಹಿತಿ ದೊರೆತಿದೆ.

ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಹೂವಿನ ಹಡಗಲಿ ತಾಲೂಕಿನ ಕೆರೆಗಳ ರಾಜಕೀಯ ಚರಿತ್ರೆ, ಜೈನಾವಶೇಷ, ಜಾನಪದಕಲೆ, ಶಾಸನ, ದೇವಾಲಯ, ಸ್ಥಳಗಳ ಪರಿಚಯಾತ್ಮಕ ಅಧ್ಯಯನಗಳು ನಡೆದಿವೆಯೇ ಹೊರತು ಹೂವಿನ ಹಡಗಲಿ ತಾಲೂಕಿನ ಕೆರೆಗಳ ಹಾಗೂ ಕೇಂದ್ರವಾಗಿರಿಸಿಕೊಂಡು ಸಮಗ್ರವಾದ ಕೆರೆಗಳಿಗೆ ಸಂಬಂಧಿಸಿದ ಅಧ್ಯಯನವು ನಡೆದಿರುವುದಿಲ್ಲ ಆದ್ದರಿಂದ

ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನವನ್ನು ಚಾರಿತ್ರಿಕವಾಗಿ ಕಟ್ಟಿಕೊಡುವ ಉದ್ದೇಶವನ್ನು ಹೊಂದಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಬಹುತೇಕ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಛಾಯಾಚಿತ್ರಗಳನ್ನು ಈ ಅಧ್ಯಯನದ ಸಂಶೋಧನೆಗಾಗಿ ಹೂವಿನ ಹಡಗಲಿ ತಾಲೂಕನ್ನು ಆಯ್ದುಕೊಂಡಾಗ ಹೂವಿನ ಹಡಗಲಿ ತಾಲೂಕು ಮತ್ತು ಗ್ರಾಮ ಪಂಚಾಯತಿ ಕಛೇರಿಗಳಲ್ಲಿ ಗ್ರಾಮಗಳ ಪಟ್ಟಿ ಪಡೆದುಕೊಂಡು ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ತಾಲೂಕಿನ ಮೂರು ಹೋಬಳಿಗಳು, ೫೬ ಕಂದಾಯ ಗ್ರಾಮಗಳು, ೨೬ ಪಂಚಾಯತಿಗಳಿವೆ. ತಾಲೂಕಿನ ಹಳ್ಳಿಗಳಿಗೆ ಭೇಟಿ ನೀಡಿ ಪ್ರಾಚೀನ ದೇವಾಲಯ, ಶಾಸನ, ವೀರಗಲ್ಲು, ಕೆರೆ-ಬಾವಿಗಳ ಛಾಯಾಚಿತ್ರ ಹಾಗೂ ಅಗತ್ಯ ನಕ್ಷೆಗಳ ಮೂಲಕ ದಾಖಲಿಸಿಕೊಳ್ಳಲಾಗಿದೆ.

ಕೆರೆಗಳ ಬಗ್ಗೆ ಸಣ್ಣ ನೀರಾವರಿ ಇಲಾಖೆ, ಜಿಲ್ಲಾ, ತಾಲೂಕು ಮತ್ತು ಗ್ರಾಮ ಪಂಚಾಯಿತಿಗಳು ನೀಡಿದ ದಾಖಲೆಗಳು ಮತ್ತು ಕೃಷಿ ಇಲಾಖೆಯಿಂದ ಬೆಳೆಗಳಿಗೆ ಸಂಬಂಧಿಸಿದ ವರದಿಗಳು ಹಾಗೂ ಅಧ್ಯಯನಕ್ಕೆ ಪೂರಕವಾಗಿರುವ ಗ್ರಂಥಗಳಿಂದಲೂ ಮಾಹಿತಿ ಪಡೆದು, ಕೆರೆಗಳ ಏರಿ, ತೂಬು, ಕೋಡಿ ಮತ್ತು ಮೌಖಿಕ ಪರಂಪರೆ, ಜನಪದ, ನಂಬಿಕೆ, ಐತಿಹ್ಯಗಳು ಮುಂತಾದ ಪ್ರಾಥಮಿಕ ಮಾಹಿತಿಗಳನ್ನು ಸಂಗ್ರಹಿಸಿ ಆನುಷಂಗಿಕ ಆಕರಗಳ ಮೂಲಕ ಮಾಹಿತಿಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಪುರಾತತ್ವೀಯ ನೆಲೆಗಟ್ಟಿನ ಮೇಲೆ ಸಂಪ್ರಬಂಧವನ್ನು ರಚಿಸಲಾಗಿದೆ.

**ಅಧ್ಯಯನದ ಸ್ವರೂಪ**

ಹೂವಿನ ಹಡಗಲಿ ತಾಲೂಕಿನ ಕೆರೆಗಳನ್ನು ಕುರಿತು ಅಧ್ಯಯನವು ಹೆಚ್ಚಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಇದರ ಬಗ್ಗೆ ಇದುವರೆಗೂ ಕೆರೆ, ಶಾಸನ, ದೇವಾಲಯ, ಬಾವಿ ಹಾಗೂ ವೀರಗಲ್ಲುಗಳನ್ನು ಅಧ್ಯಯನ ಮಾಡಿ ಆ ಮೂಲಕ ಕೆರೆಗಳಿಗಿರುವ ಸಂಬಂಧವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಕೆರೆಗಳ ಬಗ್ಗೆ ಹೂವಿನ ಹಡಗಲಿ ಪರಿಸರದ ಜನ ಮತ್ತು ಸಣ್ಣ ನೀರಾವರಿ ಇಲಾಖೆಯವರು ನೀಡಿದ ದಾಖಲೆಗಳು ಮತ್ತು ಕೃಷಿ ಇಲಾಖೆಯಿಂದ ಬೆಳೆಗಳಿಗೆ ಸಂಬಂಧಿಸಿದ ವರದಿಗಳನ್ನು ಸಂಗ್ರಹಿಸಿ ಹಾಗೂ ಅಧ್ಯಯನಕ್ಕೆ ಪೂರಕವಾಗಿರುವ ಗ್ರಂಥಗಳಿಂದ ಮಾಹಿತಿ ಪಡೆಯಲಾಗಿದೆ. ಕೆರೆಗಳ ಏರಿ, ತೂಬು, ಕೋಡಿ, ಕಾಲುವೆ, ಕಟ್ಟೆ ಇವುಗಳ ಛಾಯಾಚಿತ್ರವನ್ನು ಸಂಗ್ರಹಿಸಲಾಗಿದೆ.

ಪ್ರಸ್ತುತ 'ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ.

**ಮೊದಲನೆಯ ಅಧ್ಯಾಯ** ಪ್ರಸ್ತುತ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ಸಮೀಕ್ಷೆ ಹಾಗೂ ಅಧ್ಯಯನದ ವಿಧಾನ ಇಲ್ಲಿ ಒಟ್ಟಾರೆ ಈ ಅಧ್ಯಾಯದ ರೂಪುರೇಷೆಯನ್ನು ವಿವರಿಸಲಾಗಿದೆ.

**ಎರಡನೆಯ ಅಧ್ಯಾಯ** ಈ ಅಧ್ಯಾಯದಲ್ಲಿ ಹೂವಿನ ಹಡಗಲಿ ತಾಲೂಕಿನ ಭೌಗೋಳಿಕ ಪರಿಚಯ ರಾಜಕೀಯ ಇತಿಹಾಸ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ಪ್ರಸ್ತಾಪಿಸಲಾಗಿದೆ. ಭೌಗೋಳಿಕತೆಯಲ್ಲಿ ಹೂವಿನ ಹಡಗಲಿ ತಾಲೂಕಿನ ಜನಸಂಖ್ಯೆ, ಜಾತಿ ಜನಾಂಗ, ಬೆಟ್ಟ ಗುಡ್ಡ, ಅರಣ್ಯ ಸಂಪತ್ತು, ಮತ್ತು ಕೃಷಿ ಬೆಳೆಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಅದೇ ರೀತಿ ಚಾರಿತ್ರಿಕ ಹಿನ್ನಲೆಯಲ್ಲಿ ತಾಲೂಕಿನಲ್ಲಿ ವಿವಿಧ ರಾಜಮನೆತನಗಳ ಆಳ್ವಿಕೆಯ ಅವಧಿಯಲ್ಲಿ ನಿರ್ಮಿಸಲಾದ ಕೆರೆಗಳ ಬಗ್ಗೆ ಶಾಸನದಲ್ಲಿ ಉಲ್ಲೇಖವಿರುವ ಕೆರೆಗಳ ಕುರಿತು ಅಧ್ಯಯನ ಮಾಡಲಾಗಿದೆ.

**ಮೂರನೆಯ ಅಧ್ಯಾಯ** ಪ್ರಸ್ತುತ ಅಧ್ಯಾಯದಲ್ಲಿ ಕೆರೆಗಳ ಉಗಮ, ಪರಂಪರೆ, ನಾಮಾವಳಿಗಳು, ವರ್ಗೀಕರಣ, ಮಾಹಿತಿಯ ಕುರಿತು ಅಧ್ಯಯನ ಮಾಡಲಾಗಿದೆ.

**ನಾಲ್ಕನೆಯ ಅಧ್ಯಾಯ** ಈ ಅಧ್ಯಾಯದಲ್ಲಿ ಕೆರೆ ನಿರ್ಮಾಣ, ನಿರ್ಮಾಣದ ಉದ್ದೇಶ, ಕೆರೆಗಳ ನಿರ್ಮಾಣಕ್ಕೆ ಅಗತ್ಯವಾದ ಅಂಶಗಳ ಕುರಿತು ಮತ್ತು ಕೆರೆಗಳನ್ನು ಕಟ್ಟಲು ತೆಗೆದುಕೊಳ್ಳಬೇಕಾದ ಮುನ್ನಚ್ಚರಿಕೆ ಕ್ರಮಗಳ ಕುರಿತು ಚರ್ಚಿಸಲಾಗಿದ್ದು, ಅದೇ ರೀತಿ ಹೂವಿನ ಹಡಗಲಿ ತಾಲೂಕಿನ ಪ್ರಮುಖ ಕೆರೆಗಳ ಕುರಿತು ಚರ್ಚಿಸಲಾಗಿದ್ದು, ಕೆರೆಗಳ ರಚನೆ ವಿಧಾನ ಮತ್ತು ತಾಂತ್ರಿಕತೆ ಬಗ್ಗೆ ವಿವರಿಸಲಾಗಿದೆ. ಕೆರೆಗೆ ಸಂಬಂಧಿಸಿದಂತೆ ಕೆಲವು ಮುಖ್ಯ ಭಾಗಗಳಾದ ಜಲಾನಯನ ಪ್ರದೇಶ, ಕೆರೆಗಳ ಅಂಗಳ, ಏರಿ ನಿರ್ಮಾಣ, ತೂಬು ರಚನೆ, ಕಾಲುವೆ ವ್ಯವಸ್ಥೆ, ಕೋಡಿಗಳು, ಕೆರಯ ನಿರ್ವಹಣೆಯ ಬಗ್ಗೆ ಶಾಸನಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

**ಐದನೆಯ ಅಧ್ಯಾಯದಲ್ಲಿ** ಕೆರೆಗಳಿಗೆ ಸಂಬಂಧಿಸಿದ ಕೆಲವು ನಂಬಿಕೆಗಳು ಮತ್ತು ಹಳ್ಳಿಗಳಲ್ಲಿ ಆಚರಿಸಲಾದ ಕೆಲವು ಆಚರಣೆ, ಹಬ್ಬಗಳ ಕುರಿತು ಅವುಗಳ ಬಗ್ಗೆ ಕ್ಷೇತ್ರಕಾರ್ಯದಲ್ಲಿ ವ್ಯಕ್ತಿಗಳಿಂದ ತಿಳಿದುಬಂದ ಮಾಹಿತಿಯನ್ನು ಒದಗಿಸಲಾಗಿದೆ.

**ಆರನೆಯ ಅಧ್ಯಾಯ** ಈ ಅಧ್ಯಯನವು ಸಮಾರೋಪವಾಗಿದ್ದು, ಒಟ್ಟಾರೆ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ತಿಳಿಸಲಾಗಿದೆ. ಅಧ್ಯಯನದ ವಿಷಯಕ್ಕೆ ಪೂರಕವಾಗಿ ಭೇಟಿನೀಡಿದ ವ್ಯಕ್ತಿಗಳ

ವಿವರ, ನಕ್ಷೆಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ತೆಗೆದಿರುವ ಪ್ರಮುಖ ಛಾಯಾಚಿತ್ರಗಳನ್ನು ಈ ಅಧ್ಯಯದಲ್ಲಿ ನೀಡಲಾಗಿದೆ.

# ಅಧ್ಯಾಯ – ೨

## ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

### ಭೌಗೋಳಿಕ ಹಿನ್ನೆಲೆ

ಮಾನವ ಸಂಸ್ಕೃತಿಯ ಏಳಿಗೆ ಮತ್ತು ಅವನತಿಯಲ್ಲಿ ಪರಿಸರ ಪ್ರಮುಖ ಪಾತ್ರವಹಿಸುತ್ತದೆ. ವಿವಿಧ ಅರಸು ಮನೆತನಗಳಲ್ಲಿ ಬೆಳವಣಿಗೆ ಮತ್ತು ಅವನತಿ, ಕೀರ್ತಿ ಪತಾಕೆ ಅಲ್ಲಿನ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ. ಒಂದು ದೇಶದ ಇತಿಹಾಸವನ್ನು ತಿಳಿಯಬೇಕಾದರೆ ಮೊದಲು ಅಲ್ಲಿನ ಭೌಗೋಳಿಕ ಅಂಶಗಳಾದ ಆ ಪ್ರದೇಶದ ಸ್ಥಾನ, ಜಲಾಶಯಗಳು, ನದಿ ಕಣಿವೆಗಳು, ಕಾಡು, ಮರುಭೂಮಿ, ವಾಯುಗುಣ, ಪರ್ವತಗಳು, ಸಮುದ್ರ ಆ ಪ್ರದೇಶದ ಆಕಾರ ಮತ್ತು ವಿಸ್ತಾರ ಇವುಗಳೆಲ್ಲವನ್ನು ತಿಳಿದುಕೊಳ್ಳಬೇಕಾಗುತ್ತದೆ. ಇವು ಒಂದು ಪ್ರದೇಶದಲ್ಲಿನ ನಾಗರೀಕತೆ ಬೆಳೆಯುವುದಕ್ಕೆ ಮತ್ತು ಇತಿಹಾಸ ಬೆಳವಣಿಗೆಗೆ ಪೂರಕವಾಗಿರುತ್ತವೆ. ಜೊತೆಗೆ ಇವು ಸಾಂಸ್ಕೃತಿಕ ಬೆಳವಣಿಗೆಗೂ ಕೂಡ ಸಹಕಾರಿಯಾಗುತ್ತವೆ. ಅದಕ್ಕಾಗಿಯೇ ಕ್ರಿ.ಪೂ. ೨ನೇ ಶತಮಾನದ ಗ್ರೀಕ್ ಇತಿಹಾಸಕಾರ ಪಾಲಿಬಿಯಸ್ "ಭೌಗೋಳಿಕ ಹಿನ್ನೆಲೆಯಲ್ಲಿ ಮಾತ್ರ ಇತಿಹಾಸವನ್ನು ಸರಿಯಾಗಿ ಅರಿಯಲು ಸಾಧ್ಯ" ಎಂದಿದ್ದಾರೆ.[೧]

ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ "ಹೂವಿನಹಡಗಲಿ ತಾಲೂಕಿನ ಕೆರೆಗಳ ಅಧ್ಯಯನ"ಕ್ಕೆ ತೊಡಗುವಾಗ ಅದರ ಭೌಗೋಳಿಕ ಹಿನ್ನೆಲೆಯನ್ನು ಅವಲೋಕಿಸಬೇಕಾಗುತ್ತದೆ. ಹಡಗಲಿ ಮತ್ತು ಅದರ ಸುತ್ತಮುತ್ತಲಿರುವ ಮಾನವ ವಾಸಯೋಗ್ಯ ಭೌಗೋಳಿಕ ಪರಿಸರದಿಂದಾಗಿ, ಇಲ್ಲಿ ಬಹು ಹಿಂದಿನಿಂದ ಮಾನವ ಸಂಸ್ಕೃತಿ ರೂಪಗೊಂಡಿದೆ. ಇಲ್ಲಿನ ಭೌಗೋಳಿಕ ಪರಿಸರದಲ್ಲಿ ಕಂಡು ಬರುವ ಪ್ರಮುಖ ಭೌಗೋಳಿಕ ಅಂಶಗಳು ಯಾವುವು ಮತ್ತು ಅವು ಇಲ್ಲಿನ ಮಾನವ ಸಂಸ್ಕೃತಿ ಅಭಿವೃದ್ಧಿಯಲ್ಲಿ ಹೀಗೆ ತಮ್ಮ ಪಾತ್ರವನ್ನು ನಿರ್ವಹಿಸುತ್ತವೆ. ಎಂಬುದನ್ನು ಅಧ್ಯಯನ ಮಾಡುವುದು ಮುಖ್ಯವೆನಿಸುತ್ತದೆ.

### ಹೂವಿನ ಹಡಗಲಿ ತಾಲೂಕು

"ಮಲ್ಲಿಗೆಯ ತವರೂರು" ಮತ್ತು "ಮಲ್ಲಿಗೆಯ ನಾಡೆಂಬ ಕೀರ್ತಿಗೆ ಪಾತ್ರವಾಗಿರುವ ಹೂವಿನ ಹಡಗಲಿಯೂ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ನೈರುತ್ಯ ಭಾಗದಲ್ಲಿದೆ. ಇದು ೧೪° ೫೪' ೫೫" ಉತ್ತರ ಅಕ್ಷಾಂಶ ಮತ್ತು ೭೬°೦೦' ಪೂರ್ವ ರೇಖಾಂಶಗಳ ನಡುವೆ ಇದೆ ಮತ್ತು ಸಮುದ್ರ ಮಟ್ಟದಿಂದ ೫೩೬ ಮೀ ಎತ್ತರದಲ್ಲಿದೆ. ಹೂವಿನ ಹಡಗಲಿಯೂ ಪ್ರಸಕ್ತ ಪಟ್ಟಣದ ಪಂಚಾಯಿತಿಯ ಕೇಂದ್ರ ಮತ್ತು ತಾಲೂಕು ಕೇಂದ್ರವೂ ಆಗಿದೆ. ಇದು ಜಿಲ್ಲಾ ಕೇಂದ್ರ ಬಳ್ಳಾರಿಯಿಂದ ಸುಮಾರು ೧೫೦ ಕಿ.ಮೀ ದೂರದಲ್ಲಿದೆ ಮತ್ತು ರಾಜಧಾನಿ ಬೆಂಗಳೂರಿನಿಂದ ೩೪೧ ಕಿ.ಮೀ ದೂರದಲ್ಲಿದೆ. ಹಡಗಲಿ ಮೊದಲು ಹೋಬಳಿಯಾಗಿತ್ತು. ನಂತರ ತಾಲೂಕು ಕೇಂದ್ರವಾಗಿ ರಚಿಸಲ್ಪಟ್ಟಿತು. ಹಿಂದೆ ಹೂವಿನ ಹಡಗಲಿ ಎಂದು

ಕರೆಯಲ್ಪಡುತ್ತಿದ್ದ ಈ ಪ್ರದೇಶದ ಹೆಸರಿನಲ್ಲಿ ಕಾಲಕ್ರಮೇಣ "ಹೂವಿನ" ಎಂಬ ಪದವು ಮಾಯವಾಗಿ "ಹಡಗಲಿ" ಎಂಬುದು ಮಾತ್ರ ಉಳಿದುಕೊಂಡಿತು. ಆದರೆ ಸರ್ಕಾರಿ ದಾಖಲೆಗಳಲ್ಲಿ "ಹೂವಿನ ಹಡಗಲಿ" ಎಂದು ದಾಖಲೆಯಾಗಿದೆ. ಇಂದು ಹಡಗಲಿ, ಹಡಗ್ಲಿ ಹಾಗೂ ಹೂವಿನ ಹಡಗಲಿ ಎಂದು ಸಹ ಜನರ ಭಾಷೆಯಲ್ಲಿ ಬಳಕೆಯಲ್ಲಿದೆ. ಈ ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣವು ೨.೩೪, ೩೧೭.೧೭ ಚದರ ಕಿ. ಮೀ ಇದೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಏಳು ತಾಲೂಕುಗಳಲ್ಲಿ ಹೂವಿನ ಹಡಗಲಿ ತಾಲೂಕು ಒಂದಾಗಿದೆ. ಇದು ಜಿಲ್ಲಾ ಕೇಂದ್ರದಿಂದ ನೈರುತ್ಯ ದಿಕ್ಕಿನಲ್ಲಿದ್ದು ಹಲವು ರೀತಿಯ ವೈಶಿಷ್ಟ್ಯಗಳಿಗೆ ಹೆಸರುವಾಸಿಯಾಗಿದೆ. ಪೂರ್ವದಲ್ಲಿ ಹಗರಿಬೊಮ್ಮನಹಳ್ಳಿ, ದಕ್ಷಿಣದಲ್ಲಿ ದಾವಣಗೆರೆ ಜಿಲ್ಲೆಯ ಮುಂಡರಗಿ ತಾಲೂಕು ಹಾಗೂ ಪಶ್ಚಿಮದಲ್ಲಿ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲೂಕುಗಳು ಸುತ್ತುವರಿದಿದ್ದು. ಇವು ತಾಲೂಕಿನ ಗಡಿಗಳಾಗಿವೆ. ಈ ತಾಲೂಕಿನ ದಕ್ಷಿಣ ಮತ್ತು ಪಶ್ಚಿಮದ ಅಂಚಿನಲ್ಲಿ ತಾಲೂಕಿನ ಗಡಿಯಾಗಿ "ತುಂಗಭದ್ರಾ" ನದಿ ತಾಲೂಕು ಕೇಂದ್ರದಿಂದ ೮ ಕಿ.ಮೀ ದೂರದಲ್ಲಿ ಹರಿಯುತ್ತದೆ. ತುಂಗಭದ್ರಾ ನದಿಯು ಇಲಲಿ ಹರಿಯುವುದರ ಮೂಲಕ ಇಲ್ಲಿನ ರೈತರ ಮತ್ತು ಈ ಭಾಗದ ಜನರ ಕುಡಿಯುವ ನೀರಿನ ಅವಶ್ಯಕತೆ ಪೂರೈಸಿದೆ. ಹೂವಿನ ಹಡಗಲಿ ತಾಲೂಕನ್ನು ಆಡಳಿತ ಅನುಕೂಲಕ್ಕಾಗಿ ಹೂವಿನ ಹಡಗಲಿ (೯೯.೪೦೬,೮೭) ಹೀರೆಹಡಗಲಿ (೬೮, ೨೬೨, ೧೮) ಇಟಗಿ (೬೬, ೬೪೮, ೧೨) ಎಂಬ ಹೊಬಳಿಗಳನ್ನಾಗಿ ವಿಂಗಡಿಸಲಾಗಿದೆ.[2] ಇಲ್ಲಿ ೨೬ ಗ್ರಾಮ ಪಂಚಾಯತಿಗಳು ಮತ್ತು ೧೧೨ ಗ್ರಾಮಗಳು ಈ ತಾಲೂಕಿನಲ್ಲಿದ್ದು, ಅದರಲ್ಲಿ ೫೬ ಗ್ರಾಮಗಳು ಕಂದಾಯ ಗ್ರಾಮಗಳಾಗಿವೆ. ೨೦೧೧ರ ಜನಗಣತಿಯ ಪ್ರಕಾರ ಇಲ್ಲಿ ಒಟ್ಟು ಜನಸಂಖ್ಯೆ ೧, ೯೫, ೨೧೯ ಇದೆ. (ಗಂಡು – ೯೬, ೮೫೩ ಹೆಣ್ಣು ೯೬, ೩೬೬) ಲಿಂಗಾನುಪಾತ ೯೭೦ ರಷ್ಟಿದೆ.[3]

**ಜನಗಣತಿ – ೨೦೧೧ ಹೂವಿನ ಹಡಗಲಿ ತಾಲೂಕು**

| ಕ್ರ.ಸಂ | ವಿವರ | ಹಡಗಲಿ ತಾಲೂಕು – ೨೦೦೧ | ೨೦೧೧ |
|---|---|---|---|
| ೧ | ಕಂದಾಯ ಗ್ರಾಮಗಳು | ೫೬ | ೫೬ |
| ೨ | ಜೆಂತಕಲ್ ಗ್ರಾಮ ಹೋಬಳಿಗಳು | ೧<br>೩ | ೧<br>೩ |

| | | | |
|---|---|---|---|
| ೩ | ಗ್ರಾಮಪಂಚಾಯತಿಗಳು ಪಟ್ಟಣ ಪಂಚಾಯತಿ | ೨೪<br>೧ | ೨೪<br>೧ |
| ೪ | ಒಟ್ಟು ಜನಸಂಖ್ಯೆ (ಲಕ್ಷ) ಪುರುಷರು (ಲಕ್ಷಗಳು)<br>ಮಹಿಳೆಯರು (ಲಕ್ಷಗಳು) | ೧.೬೮<br>೦.೮೫<br>೦.೮೩ | ೧,೯೫,೨೧೯<br>೯೮,೮೫೩<br>೬೨,೫೬೬ |
| ೫ | ಜನಸಾಂದ್ರತೆ ಪ್ರ.ಚ.ಕಿ.ಮೀ | ೧೭೭ | ೨೧೮ |
| ೬ | ಲಿಂಗಾನುಪಾತ<br>(೧೦೦೦ ಪುರುಷರಿಗೆ | ೯೨೯ | ೯೨೦ |
| ೭ | ಗ್ರಾಮೀಣ ಪ್ರದೇಶ ಜನಸಂಖ್ಯೆ | ೧೪,೫೦೦ | ೧,೬೭,೨೫೨ |
| ೮ | ನಗರ ಪ್ರದೇಶದ ಜನಸಂಖ್ಯೆ | ೨೩,೦೦೦ | ೨೩,೯೬೭ |
| ೯ | ಸಾಕ್ಷರತೆ<br>ಪುರುಷರ ಸಾಕ್ಷರತೆ<br>ಮಹಿಳೆಯರ ಸಾಕ್ಷರತೆ | ೬೨,೪೩<br>೬೧.೬೯<br>೪೧.೮೯ | ೧.೨೦.೬೫೭<br>೮೧.೪೩<br>೬೨.೪೦ |

ಮೊದಲು ಮುಂಬೈ ಕರ್ನಾಟಕಕ್ಕೆ ಸೇರಿದ ಬಳ್ಳಾರಿ ಜಿಲ್ಲೆಯನ್ನು ಆಡಳಿತದ ಅನುಕೂಲಕ್ಕಾಗಿ ಸ್ವಾತಂತ್ರ್ಯ ನಂತರ ಎರಡು ಭಾಗಗಳಾಗಿ ಮತ್ತು ಎಂಟು ತಾಲೂಕುಗಳಾಗಿ ವಿಂಗಡಿಸಲಾಗಿತ್ತು. ಮೊದಲನೆಯದು 'ಬಳ್ಳಾರಿ ವಿಭಾಗ' ಇದರಲ್ಲಿ ಸಂಡೂರು ಶಿರಗುಪ್ಪ ತಾಲೂಕುಗಳು ಸೇರಿದ್ದವು. ಎರಡನೆಯದು 'ಹೊಸಪೇಟೆ' ಉಪವಿಭಾಗ ಇದರಲ್ಲಿ ಕೂಡ್ಲಗಿ, ಹರಪ್ಪನಹಳ್ಳಿ, ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳು ಸೇರಿದ್ದವು. ಅಂದರೆ ೧೯೯೮ ಕ್ಕೆ ಮೊದಲು ಬಳ್ಳಾರಿ ಜಿಲ್ಲೆಯು ೮ ತಾಲೂಕುಗಳನ್ನು ಹೊಂದಿತ್ತು. ಅವುಗಳೆಂದರೆ ಬಳ್ಳಾರಿ, ಸಿರಗುಪ್ಪ, ಹೊಸಪೇಟೆ, ಕೂಡ್ಲಿಗಿ, ಸಂಡೂರು, ಹಗರಿಬೊಮ್ಮಸಹಳ್ಳಿ, ಹಡಗಲಿ ಮತ್ತು ಹರಪನಹಳ್ಳಿ ೧೯೯೮ ರ ನಂತರ ದಾವಣಗೆರೆ ಜಿಲ್ಲೆಯೂ ಹೊಸದಾಗಿ ರಚನೆಯಾಯಿತು. ಆಗ ಈ ಜಿಲ್ಲೆಗೆ ಹಡಗಲಿ ಮತ್ತು ಹರಪನಹಳ್ಳಿಯನ್ನು ಸೇರಿಸಬೇಕೆಂದು ಕರ್ನಾಟಕ ಸರ್ಕಾರದ ಎ.ಡಿ ಗೋರ್ವೆಲ ಮತ್ತು ಪಿ.ಸಿ.ಮಹಾನೋಬಿಸ್ ಮುಂತಾದ ತಜ್ಞರನ್ನು ಒಳಗೊಂಡ ಸಮಿತಿಯೂ ಸೂಚಿಸಿತ್ತು. ಈ ಸೂಚನೆಗೆ ಹಡಗಲಿ ಮತ್ತು ಹರಪನಹಳ್ಳಿ ತಾಲೂಕುಗಳಿಂದ

ಭಾರೀ ವಿರೋಧ ವ್ಯಕ್ತವಾಯಿತು. ಈ ವಿರೋಧದ ಮಧ್ಯೆಯೂ ಶ್ರೀ ಹುಂಡೇಕರ್ ಮತ್ತು ಗದ್ದಿಗೌಡರ್ ಸಮಿತಿಗಳು ಹರಪನಹಳ್ಳಿ ತಾಲೂಕನ್ನು ಮಾತ್ರ ದಾವಣಗೆರೆ ಜಿಲ್ಲೆಗೆ ಸೇರ್ಪಡೆಗೊಳಿಸಿತು.[೪] ಹಡಗಲಿ ತಾಲೂಕು ಬಳ್ಳಾರಿ ಜಿಲ್ಲೆಯಲ್ಲಿಯೇ ಉಳಿದು ಇಂದಿಗೂ ತಾಲೂಕು ಕೇಂದ್ರವಾಗಿ ಮುಂದುವರೆದಿದೆ. ಇಂದು ಬಳ್ಳಾರಿ ಜಿಲ್ಲೆಯು ಕೈಗಾರಿಕೆಗಳಿಂದ ತುಂಬಿಕೊಂಡಿದ್ದು, ಜಿಲ್ಲೆಯ ಬಳ್ಳಾರಿ, ಸಂಡೂರು, ಹೊಸಪೇಟೆ ತಾಲೂಕುಗಳು ಗಣಿಗಾರಿಕೆಗೆ ಹೆಸರಾಗಿವೆ. ಉಳಿದಂತೆ ಗಣಿಗಾರಿಕೆಯಿಂದ ದೂರವಿದ್ದ ಇಲ್ಲಿನ ಜನರು ವ್ಯವಸಾಯವನ್ನೇ ನಂಬಿಕೊಂಡು ಜೀವಿಸುತ್ತಿದ್ದಾರೆ. ಹಡಗಲಿಯು ಇತಿಹಾಸ ಪ್ರಸಿದ್ಧ ದೇವಾಲಯಗಳನ್ನು, ಕೆರೆಗಳನ್ನು ಹೊಂದಿಕೊಂಡಿದೆ. ಹಾಗಾಗಿಯೇ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿಯೂ ಸಹ ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದಿದೆ.[೫]

**ಹೆಸರಿನ ಹಿನ್ನೆಲೆ ಮತ್ತು ಪದ ನಿಷ್ಪತ್ತಿ**

ಹೂವಿನಹಡಗಲಿಯೂ ಮಲ್ಲಿಗೆ ಹೂವಿಗೆ ದೇಶದಲ್ಲಿಯೇ ಪ್ರಸಿದ್ಧವಾಗಿದೆ. ಹಾಗಾಗಿ ಇದನ್ನು ಮಲ್ಲಿಗೆಯ ತವರೂರು ಮತ್ತು ಮಲ್ಲಿಗೆಯ ನಾಡು ಎಂದು ಕರೆಯಲಾಗುತ್ತದೆ. ಮಲ್ಲಿಗೆ ಹೂವಿನ ಕೃಷಿ ಹಿಂದಿನಿಂದ ಇಲ್ಲಿ ಜನಪ್ರಿಯವಾಗಿದೆ. "ತುಂಗಭದ್ರಾ" ನದಿ ಮೂಲಕ ಮಲ್ಲಿಗೆ ಹೂವುಗಳನ್ನು ದೋಣಿಯಲ್ಲಿ ತುಂಬಿಕೊಂಡು ಹಂಪಿಯ "ಶ್ರೀ ವಿರುಪಾಕ್ಷ" ದೇವರ ಪೂಜೆಗೆ ಪ್ರತಿನಿತ್ಯ ಕಳುಹಿಸಿಕೊಡಲಾಗುತ್ತಿತ್ತು. ಈ ರೀತಿ ಕಳುಹಿಸಿಕೊಡುತ್ತಿದ್ದುದರಿಂದ "ಹೂವಿನಹಡಗಲಿ" ಎಂಬ ಹೆಸರು ಬಂದಿತು ಎನ್ನುವ ಅಭಿಪ್ರಾಯ ಇದೆ. ಈ ಊರಿಗೆ ಹೂವಿನ ಹಡಗಲಿ ಎಂದು ಹೆಸರು ಬರಲು ಈ ಊರಿನಿಂದ ಹಂಪೆಗೆ ಬರುತ್ತಿದ್ದ ಹೂಗಳು ಮಾತ್ರ ಕಾರಣ ಅಲ್ಲ. ಬದಲಾಗಿ ಇದಕ್ಕೂ ಮೊದಲೇ ಈ ಊರಿಗೆ "ಪೂವಿನ ಪಡುಗಿಲೆ" ಎಂಬ (ಸುಮಾರು ೮೦೦ ವರ್ಷಗಳ ಹಿಂದೆ) ಹೆಸರು ಇತ್ತೆಂದು ತಿಳಿದು ಬರುತ್ತದೆ.[೬] ಕಲ್ಯಾಣ ಚಾಲುಕ್ಯರ ದೊರೆ "ಆರನೇ ವಿಕ್ರಮಾದಿತ್ಯನ ಕಾಲದ ಕೇಶವ ಮತ್ತು ಕಲ್ಲೇಶ್ವರ ದೇವಸ್ಥಾನದ ಶಾಸನಗಳಲ್ಲಿ ಮತ್ತು ಇತರೆ ಶಾಸನಗಳಲ್ಲಿ ಇದು ಉಲ್ಲೇಖಗೊಂಡಿದೆ. ಹೂವಿನ ಹಡಗಲಿ ಎಂಬ ಪದವೂ ಕೂಡ ಅಲ್ಲಲ್ಲಿ ಚಾಲ್ತಿಯಲ್ಲಿರುವುದು ಕಂಡುಬರುತ್ತದೆ. ಹಡಗಲಿಯಲ್ಲಿ ಕೆಲ ಶಾಸನಗಳು ದೊರೆತಿದ್ದು ಅವುಗಳಲ್ಲಿ ಊರಿನ ಹೆಸರನ್ನು ಅಥವಾ ಈ ಪ್ರದೇಶವನ್ನು "ಪೂವಿನ ಪಡಂಗಿಲೆ" "ಪೂವಿನ ಪೊಸವಡಂಗಿಲೆ" ಎಂದು ಹೆಸರಿಸಿವೆ. ಪೂವಿನ ಪಡಂಗಿಲೆ ಎಂಬ ಹೆಸರೇ ಸೂಚಿಸುವಂತೆ ಅದು ಹೂದೋಟ, ಇಲ್ಲವೇ ಮಾಲೆಗಾರರಿಗೆ ಪ್ರಾಶಸ್ತ್ಯ ನೀಡಲಾಗಿದ್ದ ಸ್ಥಳ ಎಂದು ಅರ್ಥವಾಗುತ್ತದೆ. ಈ ಪದವನ್ನು ಬಿಡಿಸಿ ಬರೆದಾಗ "ಪೂವು+ಇನ+ಪಡಂಗಿಲೆ" ಎಂದಾಗುತ್ತದೆ. ಪೂವು ಎಂದರೆ ಪುಷ್ಪ, ಹೂವು ಎಂದರ್ಥ. ಪಡುಗಿಲೆ ಎಂದರೆ ತೆಪ್ಪದಲ್ಲಿ ಹೂವಿನ ರಾಶಿಯನ್ನು ತೇಲಿಬಿಡುತ್ತಿದ್ದವರ ನೆಲೆವೀಡಾಗಿತ್ತು ಎಂದು ತಿಳಿಯುತ್ತದೆ. ಜೊತೆಗೆ ತುಂಗಭದ್ರಾ ತೀರದ ಹಂಪೆಯ ವಿರೂಪಾಕ್ಷನಿಗೆ

ಪೂಜೆಯ ವೇಳೆಗೆ ಮಲ್ಲಿಗೆ ಹೂವುಗಳು ತಲುಪುವಂತೆ ಪಡಂಗಿಲೆಯಲ್ಲಿ ಹೂವಿನ ರಾಶಿಯನ್ನು ತೇಲಿ ಬಿಡುತ್ತಿದ್ದರೆಂಬುದಾಗಿ ಜನರಲ್ಲಿ ಇಂದಿಗೂ ಪ್ರತೀತಿ ಇದೆ. ಹೂವಿನ ಹಡಗಲಿ ವಿಚಾರವೂ ಹಡಗಲಿಯ ಶಾಸನಗಳಲ್ಲಿ ಮಾತ್ರವಲ್ಲದೆ ಬೇರೆ ಬೇರೆ ತಾಲೂಕಿನ ಬೇರೆ ಬೇರೆ ಶಾಸನಗಳಲ್ಲಿ ದೊರೆಯುತ್ತದೆ. ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ಐವೂರಿನಲ್ಲಿ. ಗದಗ ಜಿಲ್ಲಾ ಮುಂಡರಗಿ ತಾಲೂಕಿನ ಮಾಳದಾಲೂರಿನಲ್ಲಿ (ಆಲೂರು ಶಾಸನ ಕ್ರಿಪೂ ೧೮೯೧) ಹೂವಿನಹಡಗಲಿ ತಾಲೂಕಿನ ಕೊಟ್ನಕಲ್‌ನಲ್ಲಿ ಹಗರಿಬೊಮ್ಮನಹಳ್ಳಿ ತಾಲೂಕಿನ ಏಣಿಗೆಯಲ್ಲಿ ಮತ್ತು ಹಡಗಲಿಯ ಪಟ್ಟಣದಲ್ಲಿರುವ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.[2] ಏಣಿಗೆಯ ಹನುಮಂತ ದೇವರ ಗುಡಿಯ ಮುಂದಿರುವ ಶಾಸನ (೧೪,೧,೧೨೫೫) ಸೇವುಣ ಕನ್ನರದೇವ ೧೩ನೇ ವರ್ಷದಲ್ಲಿ ಅವನು ದೇವಗಿರಿಯಲ್ಲಿ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದನು. ನೊಳಂಬವಾಡಿ ಕುಂತಳ ದೇಶವು ನಾಶಿಕದಂತಿತ್ತು. ಕೋಗಳಿ ಆ ಕುಂತಳನಾಡಿನ ಕಣ್ಣಿನಂತಿತ್ತು ಇಂತಹ ಕೋಗಳಿ ನಾಡಿಗೆ ಸೇರಿದ ಹೂವಿನಹಡಗಲಿಯನ್ನು ಶಾಸನವು ಪೂವಿನ-ಪಡಂಗಿಲೆ (ಹೂವಿನ ಹಡಗಲಿ) ಎಂದು ಉಲ್ಲೇಖಿಸಿದೆ.[೮]

ಹೂವಿನ ಹಡಗಲಿಯ ಹನುಮಂತ ದೇವಾಲಯದ ಆವರಣದಲ್ಲಿನ ಶಾಸನದಲ್ಲಿ "ಅಚ್ಯುತ ದೇವರಾಯನ" ಕಾಲದಲ್ಲಿ 'ಹೂವಿನಹಡಗಲಿಯ' ಹನುಮಂತ ದೇವರಿಗೆ ಸಿರಿಯಪ್ಪನು ಭೂದಾನ ಮಾಡಿದನು ಎಂದು ಉಲ್ಲೇಖಿಸಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಹಡಗಲಿಯ ಶಾಸನಗಳಲ್ಲಿ ತನ್ನದೇ ಆದ ಪದ ನಿಷ್ಪತ್ತಿಯನ್ನು ಹೊಂದಿದ್ದು ಮೇಲಿನ ಎಲ್ಲಾ ಶಾಸನಗಳ ಉಲ್ಲೇಖಗಳಿಂದ ಮೊದಲು 'ಪೂವಿನ ಪಡಂಗಿಲೆ' ಎಂದು ಕರೆಯಲ್ಪಟ್ಟಿದ್ದು ನಂತರ ವಿಜಯನಗರ ಅರಸರ ಕಾಲಕ್ಕೆ "ಹೂವಿನಹಡಗಲಿ" ಯಾಗಿ ಮಾರ್ಪಟ್ಟು ಇಂದು "ಹೂವಿನಹಡಗಲಿ" ಎಂದು ಕರೆಯಲ್ಪಡುತ್ತಿದೆ. ಇದನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ಗುರುತಿಸಬಹುದು.

ಪೂವಿನ ಪಡಂಗಿಲೆ>ಪೊಸವಡಂಗಿಲೆ>ಪೂವಿನಪೊಸ-ವಡಂಗಿಲೆ ಎಂಬ ಪದಗಳು ಎರಡು ಹಡಂಗಿಲೆ> ಹೂವಿನ ಹಡಗಲಿ ಎಂಬಂತೆ ಕಂಡುಬರುತ್ತದೆ. ಈ ರೀತಿ ಶಾಸನಗಳಲ್ಲಿ ಹೂವಿನಹಡಗಲಿಯನ್ನು ಉಲ್ಲೇಖಿಸಿದ್ದು, ಕಾಲಕ್ರಮೇಣ ತಮ್ಮದೇ ದಾಟಿಯಲ್ಲಿ ಊರಿನ ಹೆಸರನ್ನು ಪ್ರಯೋಗಿಸುತ್ತಿರುವುದನ್ನು ಕಾಣಬಹುದು.[೯]

**ಭೌಗೋಳಿಕ ಲಕ್ಷಣಗಳು : ವೈಶಿಷ್ಟತೆ ಮತ್ತು ಪ್ರಭಾವ**

ಹೂವಿನಹಡಗಲಿಯ ಪರಿಸರ ಹಲವು ತೆರನಾದ ವೈಶಿಷ್ಟ್ಯಗಳಿಗೆ ಹೆಸರುವಾಸಿಯಾಗಿದೆ. ಮಾನವ ಸಂಸ್ಕೃತಿಯ ಏಳ್ಗೆ ಮತ್ತು ಅವನತಿಯಲ್ಲಿ ಇಲ್ಲಿನ ಭೌಗೋಳಿಕ ಅಂಶಗಳು ತುಂಬಾ ಪ್ರಭಾವ ಬೀರಿವೆ.

**ಮಾನವ ಸಂಪನ್ಮೂಲ (ಜನಸಂಖ್ಯೆ)**

೨೦೧೧ರ ಜನಗಣತಿಯ ಪ್ರಕಾರ ಹಡಗಲಿ ತಾಲೂಕಿನ ಒಟ್ಟು ಜನಸಂಖ್ಯೆ ೧,೯೫,೨೧೯ರಷ್ಟಿದೆ. ಇದರಲ್ಲಿ ನಗರ ಪ್ರದೇಶದಲ್ಲಿ ವಾಸಿಸಿರುವ ಜನರ ಸಂಖ್ಯೆ ೨೭,೯೬೭ ರಷ್ಟಿದ್ದರೆ ಗ್ರಾಮೀನ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ೧,೬೭,೨೫೨ ರಷ್ಟಿದೆ. ಪ್ರಚ.ಕಿ.ಮೀ ಜನಸಾಂದ್ರತೆಯು ೨೧೮ ಚ.ಕಿ.ಮೀ ತಾಲೂಕಿನ ಒಟ್ಟು ಸಾಕ್ಷರತೆಯ ಪ್ರಮಾಣ ಶೇ.೨೭.೦೮ ರಷ್ಟಿದ್ದು ಇದರಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ಶೇ. ೮೧,೮೦ ರಷ್ಟಿದೆ.[೧೦] ಈ ಮೇಲಿನ ಅಂಕಿ-ಸಂಖ್ಯೆಗಳನ್ನು ಗಮನಿಸಿದರೆ ನಗರ ಪ್ರದೇಶಕ್ಕಿಂತ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ಹೆಚ್ಚಾಗಿದೆ. ಜೊತೆಗೆ ಮಹಿಳೆಯ ಪ್ರಮಾಣಕ್ಕಿಂತ ಕಡಿಮೆ ಇರುವುದು ಕಂಡುಬರುತ್ತದೆ. ಇಲ್ಲಿ ಹಲವಾರು ಜಾತಿ ಜನಾಂಗದವರು ವಾಸಿಸಿದ್ದು ಕೃಷಿ ಆಧಾರಿತ ಕುಶಲ ಕರ್ಮಿಗಳು ಸಹ ಇರುವುದನ್ನು ಕಾಣುತ್ತೇವೆ. ಕುಂಬಾರಿಕೆ, ಚಮ್ಮಾರಿಕೆ, ಬಡಿಗತನ ಹೀಗೆ ಹಲವಾರು ವೃತ್ತಿಗಳನ್ನು ಮಾಡುವ ಜನರಿದ್ದಾರೆ. ಹಾಗೆಯೇ ಕೂಲಿ ನಾಲಿ ಮಾಡಿಕೊಂಡು ಜೀವನ ಸಾಗಿಸುವ ಜನರಿದ್ದಾರೆ. ಕೃಷಿಯೇ ಪ್ರಮುಖ ಕಸುಬಾಗಿರುವುದರಿಂದ ಕೃಷಿ ಕೂಲಿ ಕಾರ್ಮಿಕರು ಹೆಚ್ಚಾಗಿ ಕಂಡು ಬರುತ್ತಾರೆ. ಜೊತೆಗೆ ಕೂಲಿಯನ್ನರನೆ ವಲಸೆ ಹೋಗುವ ಜನರೂ ಇದ್ದಾರೆ. ಒಟ್ಟಾರೆಯಾಗಿ ಇಲ್ಲಿನ ಜನರ ಆರ್ಥಿಕ ಸ್ಥಿತಿಗತಿ ಬೇರೆ ತಾಲೂಕು ಪ್ರದೇಶಗಳಿಗೆ ಹೋಲಿಸಿಕೊಂಡರೆ ಸಾಧಾರಣವಾಗಿದೆ ಎಂದು ಹೇಳಬಹುದು. ಏಕೆಂದರೆ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ತಾಲೂಕುಗಳನ್ನು ಹೊರತುಪಡಿಸಿದರೆ ಉಳಿದೆಲ್ಲಾ ತಾಲೂಕುಗಳಲ್ಲಿಯೂ ಕೈಗಾರಿಕಾ ಕೇಂದ್ರಗಳು ಹೆಚ್ಚಾಗಿದ್ದು ಅಲ್ಲಿನ ಜನರು ಹೆಚ್ಚಾಗಿ ಕೈಗಾರಿಕೆಗಳನ್ನು ಅವಲಂಬಿಸಿದ್ದಾರೆ. ಆದರೆ ಹಡಗಲಿಯಲ್ಲಿ ಯಾವುದೇ ಕೈಗಾರಿಕೆಗಳು ಸ್ಥಾಪನೆಯಾಗಿಲ್ಲ. ಹಾಗಾಗಿ ಇಲ್ಲಿನ ಜನರು ಕೆಲಸವನ್ನರಸಿ ವಲಸೆ ಹೋಗುವುದನ್ನು ಹಾಗೂ ವ್ಯವಸಾಯವನ್ನು ಪ್ರಧಾನ ಉದ್ಯೋಗವನ್ನಾಗಿಸಿರುವುದನ್ನು ಕಾಣುತ್ತೇವೆ.[೧೧]

**ನೈಸರ್ಗಿಕ ಸಂಪನ್ಮೂಲ : ಭೌಗೋಳಿಕ ಲಕ್ಷಣಗಳು**

ಹಡಗಲಿ ಮತ್ತು ಅದರ ಸುತ್ತಮುತ್ತಲಿನ ಭೂಭಾಗಗಳು ಇಲ್ಲಿನ ಮಾನವ ಸಂಸ್ಕೃತಿಯ ವಿಕಾಸದಲ್ಲಿ ಬಹುಮುಖ್ಯವಾದ ಪಾತ್ರ ನಿರ್ವಹಿಸಿವೆ. ಆದ್ದರಿಂದ ಹಡಗಲಿಯ ಕೇಂದ್ರಭಾಗವನ್ನು ಮುಖ್ಯಭಾಗವೆಂದು ಪರಿಗಣಿಸಿ, ಆದರೆ ಸುತ್ತಮುತ್ತಲಿನ ಸುಮಾರು ೧೦೦ ಕಿ.ಮೀ ಭೂಪ್ರದೇಶವನ್ನು ಹಡಗಲಿಯ ಪರಿಸರ ಎಂದು ಪ್ರಾಸಂಗಿಕವಾಗಿ ಅಧ್ಯಯನ ಅನುಕೂಲಕ್ಕಾಗಿ ಮಾಡಿಕೊಳ್ಳಲಾಗಿದೆ. ಇಲ್ಲಿನ ಭೂಭಾಗದ ಲಕ್ಷಣಗಳನ್ನು ಈ ಮುಂದಿನಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಭೂಮಿಯ ರಚನೆ ಮತ್ತು ಶಿಲಾ ಸಂಪನ್ಮೂಲ**

ಇಲ್ಲಿನ ಭೌಗೋಳಿಕ ಪರಿಸರವು ಬೆಟ್ಟ, ಖನಿಜಗಳಿಂದ ಮತ್ತು ಗ್ರಾನೈಟ್ ಶಿಲೆಗಳಿಂದ ಆವೃತವಾಗಿದೆ. ಸಾಮಾನ್ಯವಾಗಿ ಕ್ರಿಸ್ಟಸ್‌ಲೈನ್ ಸಿಸ್ಟ್ (ಸ್ಪಟಿಕಾತ್ಮಕ ಪದರು ಶಿಲೆ) ಎಪಿಡಿಯೋರಾಯಿಟ್ಸ್ ಗ್ರಾನೈಟ್ (ಜಂಬಿಟ್ಟಿಗೆ) ಮತ್ತು ಲೇಟರ್ ಗ್ರಾನೈಟ್ ಶಿಲಾ ಪದರುಗಳಿಂದ ಕೂಡಿದೆ. ಅಲ್ಲಲ್ಲಿ ಡೈಕ್ ಶಿಲೆ ಕಂಡುಬರುತ್ತದೆ. ಕ್ರಿಸ್ಟ್‌ಲೈನ್‌ಸಿಸ್ಟ್, ಎಪಿಡಿಯೋರಾಯಿಟ್ಸ್ ಗ್ರಾನೈಟ್ ಮೊದಲಾದ ಶಿಲೆಗಳು ಇಲ್ಲಿ ದೊರೆಯುತ್ತವೆ.

ಹೂವಿನ ಹಡಗಲಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು, ಬೆಟ್ಟದಿಂದಾವರಿಸಿದೆ. ಬೆಟ್ಟದ ಮಲ್ಲೇಶ್ವರ, ಹೀರೆಗುಡ್ಡ, ಮಲ್ಲಪ್ಪನಗುಡ್ಡ, ಕಲ್ಲಪ್ಪನಗುಡ್ಡ ಕುರುವತ್ತಿ ಮೈಲಾರಗುಡ್ಡವಿದ್ದು ಅವು ಇಲ್ಲಿಯ ಎತ್ತರದ ಪ್ರದೇಶಗಳಾಗಿವೆ. ಇಲ್ಲಿನ ಹೇರಳವಾದ ಬೆಟ್ಟದಾಚೆಯನ್ನು ಗಮನಿಸಿದಾಗ ಈ ಪ್ರದೇಶವು ಹಿಂದೆ ಸಮೃದ್ಧ ಸಸ್ಯರಾಶಿಯ ತಾಣವಾಗಿತ್ತೆಂದು ತಿಳಿದುಬರುತ್ತದೆ. ಅಲ್ಲದೇ ಅದಿಮ ಸಂಸ್ಕೃತಿಯ ಜನರು ಚಿತ್ರಿಸಿರುವ ಹುಲಿ, ಚಿರತೆ, ಆನೆಯಂತಹ ಚಿತ್ರಗಳು ಆನೆಗಳು ಈ ದಟ್ಟ ಅರಣ್ಯದಲ್ಲಿ ವಾಸಿಸುತ್ತಿದ್ದ ಕುರುಹುಗಳನು ತಿಳಿಸುತ್ತದೆ.

ಹಡಗಲಿಯ ಹತ್ತಿರವಿರುವ ಮಲ್ಲಪ್ಪನ ಗುಡ್ಡ(೯೨೮ ಮೀ) ತುಂಗಭದ್ರ ನದಿ ದಂಡೆಯ ಹೊನ್ನೂರಿನ ಬಳಿ ಪ್ರಾರಂಭವಾಗಿ ಆಗ್ನೇಯ ಕಡೆಗೆ ಹೆಚ್ಚಿದೆ. ಮಲ್ಲಪ್ಪನ ಗುಡ್ಡದ ನೈರುತ್ಯಕ್ಕಿರುವ, ಕಲ್ಲಪ್ಪನ ಗುಡ್ಡ ವಾಯುವ್ಯದಿಂದ ಈಶಾನ್ಯಕ್ಕೆ ಸಾಗಿದ್ದು ಇದರಲ್ಲಿ ನರಸಿಂಹದೇವರ ಗುಡ್ಡ ಸೇರಿದಂತೆ ಉಚ್ಚಂಗಿಯಲ್ಲಿ ಕೊನೆಗೊಳ್ಳುತ್ತದೆ. ತಾಲೂಕಿನ ಪೂರ್ವ ಹಾಗೂ ಪಶ್ಚಿಮದ ನಡುವೆ ಸಂಡೂರು ಬೆಟ್ಟಗಳ ಶ್ರೇಣಿಯಿದೆ. ಇವು ಈಶಾನ್ಯದಿಂದ ಆಗ್ನೇಯದವರೆಗೂ ಹರಡಿವೆ. ಸಿರಗುಪ್ಪ ಹಾಗೂ ಬಳ್ಳಾರಿ ಜಿಲ್ಲೆಯ ಪೂರ್ವ ಭಾಗ ಬಯಲು ಪ್ರದೇಶವಾಗಿದೆ. ಈ ಪ್ರದೇಶದ ಕಪ್ಪು ಎರೆ ಮಣ್ಣಿನಿಂದ ಕೂಡಿದೆ. ಸಮತಟ್ಟಾದ ಪ್ರದೆಶದಲ್ಲಿ ಅಲ್ಲಲ್ಲಿ ಸಣ್ಣ ಬೆಟ್ಟಗಳ ಸಾಲುಗಳನ್ನು ಕಾಣುಬಹುದು. ಈ ಸಾಲು ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ಅಂದರೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣಕ್ಕೆ ಹೆಚ್ಚಿವೆ. ಇವು ಅಲ್ಲಲ್ಲಿ ಸಣ್ಣ ದ್ವೀಪಗಳ ರೀತಿಯಾಗಿ ಮೇಲೆದ್ದಿರುವುದನ್ನು ಕಾಣಬಹುದು.

ಹಡಗಲಿ ತಾಲೂಕಿನ ಗಡಿಗಳಿಗೆ ಹತ್ತಿರವಿರುವ ಸಂಡೂರು, ಹರಪ್ಪನಹಳ್ಳಿ, ಗುಡೇಕೋಟೆ, ಹೊಸಪೇಟೆ, ಕಂಪ್ಲಿ, ದರೂಜಿ, ಕೂಡ್ಲಿಗಿ, ಕುರುಗೋಡು, ಬಳ್ಳಾರಿ ಮುಂತಾದ ಕಡೆ ದೊಡ್ಡ ದೊಡ್ಡ ಬೆಟ್ಟಗಳಿವೆ. ಸಂಡೂರಿನ ಕುಮಾರಸ್ವಾಮಿ ಬೆಟ್ಟ (೧೩೬ ಮೀ) ರಾಮನಮಲೈ ಬೆಟ್ಟ (೯೯೨ ಮೀ) ಜಂಭುನಾಥ ಗುಡ್ಡ (೯೦೮ ಮೀ) ಎತ್ತರದ ಶಿಖರಗಳನ್ನು ಹೊಂದಿವೆ. ಈ ಬೆಟ್ಟಗುಡ್ಡಗಳಲ್ಲಿನ ಗುಹೆಗಳು,

ಕಲ್ಲಸರೆಗಳು ಆದಿಮಾನವರ ವಾಸಕ್ಕೆ ಒಂದೆಡೆ ಸಹಕಾರಿಯಾದರೆ, ಇನ್ನೊಂದೆಡೆ ಶಿಲೆ ಅವರಿಗೆ ಅಗತ್ಯವಾದ ಆಯುಧೋಪಕರಣಗಳನ್ನು ತಯಾರಿಸಿಕೊಳ್ಳಲು ಸಹಕಾರಿಯಾಗಿದ್ದರಿಂದ ಈ ಪರಿಸರದಲ್ಲಿ ಅಂದಿನ ಮಾನವ ನೆಲೆ ನಿಲ್ಲಲು ಸಹಕಾರಿಯಾಯಿತು.

**ನದಿ ಮತ್ತು ನೀರಿನ ಸೌಕರ್ಯಗಳು**

ಹಡಗಲಿಯಲ್ಲಿ ಹರಿಯುವ ತುಂಗಭದ್ರ ನದಿ ರಾಜ್ಯದ ಪ್ರಮುಖ ನದಿಗಳಲ್ಲಿ ಒಂದು ಇದು ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತದೆ. ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮಬೆಟ್ಟ ಸಾಲಿನ ವರಹ ಪರ್ವತದಲ್ಲಿ ಉಗಮವಾದ ತುಂಗ ಮತ್ತು ಭದ್ರಾ ಎಂಬ ಎರಡು ನದಿಗಳು ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಬಂದು ಸೇರುತ್ತವೆ. ಈ ನದಿಯನ್ನು ತುಂಗಭದ್ರ ಎಂದು ಕರೆಯಲಾಗಿದೆ. ತುಂಗಭದ್ರ ನದಿಯ ಉಲ್ಲೇಖ ರಾಮಾಯಣ ಮತ್ತು ಪುರಾಣಗಳಲ್ಲಿ ಬಂದಿದೆ. ಮಹಾಭಾರತದಲ್ಲಿ ಜಾಹ್ನವ್ಹಿ, ಕೃಷ್ಣವೇಣಿಗಳ ಜೊತೆಗೆ ತುಂಗಾವೇಣಿ ಎಂಬ ಹೆಸರು ಬರುತ್ತದೆ. ಹೊಸಪೇಟೆ ತಾಲೂಕಿನ ಹಂಪಿಯ ಕೊದಂಡಸ್ವಾಮಿ ದೇವಾಲಯದ ಬಳಿ ಇರುವ ಚಕ್ರತೀರ್ಥದ ಬಳಿ ಈ ನದಿ ಉತ್ತರಾಭಿಮುಖವಾಗಿ ಹರಿಯುತ್ತದೆ. ಇಲ್ಲಿ ಚಕ್ರಾಕಾರವಾಗಿ ಸುರುಳಿಯಾಕಾರದಲ್ಲಿ ತಿರುಗುತ್ತಾ ಹರಿಯುವುದರಿಂದ ಇದನ್ನು ಚಕ್ರತೀರ್ಥವೆಂದು, ಇದು ಇಲ್ಲಿನ ಅಧಿದೇವತೆಯಾದ ಪಂಪಾಂಬಿಕೆಯ ಪ್ರತೀಕವಾಗಿರುವ ಕಾರಣಕ್ಕೆ ಇದನ್ನು ಪಂಪಾತೀರ್ಥವೆಂದೇ ಕರೆಯಲಾಗುತ್ತದೆ. ಇದರ ನೀರು ರುಚಿಕರವಾಗಿದ್ದು ಇದರಿಂದ "ಗಂಗಾಸ್ನಾನ ತುಂಗಾಪಾನ" ಎಂಬ ನಾಣ್ಣುಡಿಯೇ ಈ ಪರಿಸರದಲ್ಲಿ ಬೆಳೆದು ಬಂದಿರುವುದು ಗಮನಾರ್ಹ. ಇದೇ ನದಿ ತುಂಬಿ ಹರಿಯುವಾಗ ಹಲವು ನೈಸರ್ಗಿಕ ಜಲಪಾತಗಳನ್ನು ವಿವಿಧ ಕಡೆ ಸೃಷ್ಟಿಸಿ ಪ್ರವಾಸಿಗರ ಆಕರ್ಷಣೆಯ ಕೇಂದ್ರವಾಗಿಸಿದೆ.

ಈ ನದಿ ಪಶ್ಚಿಮದಲ್ಲಿ ಧಾರವಾಡ, ಉತ್ತರದಲ್ಲಿ ಕೊಪ್ಪಳ ಹಾಗೂ ರಾಯಚೂರು ಜಿಲ್ಲೆಗಳಿಗೆ ಗಡಿಯಾಗಿ ಪರಿಣಮಿಸಿದೆ. ತುಂಗಭದ್ರ ನದಿಗೆ ಬಂದು ಸೇರುವ ಹಗರಿ, ಚಿಕ್ಕಹಗರಿ ನದಿಗಳು ಪ್ರಾಚೀನ ಕಾಲದಿಂದಲೂ ಕೃಷಿ ಅಭಿವೃದ್ಧಿಗೆ ನೀರನ್ನೊದಗಿಸುತ್ತವೆ.

ತುಂಗಭದ್ರ ನದಿಗೆ ಬಂದು ಸೇರುವ ಹಗರಿ, ಚಿಕ್ಕಹಗರಿಗಳಲ್ಲದೆ ಚಿನ್ನ ಹಗರಿಯನ್ನೊಳಗೊಂಡಂತೆ ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿಯುತ್ತವೆ. ತುಂಗಭದ್ರಾ ನದಿಯಂತೆ "ಹಗರಿಯೂ" ಚಿಕ್ಕಮಗಳೂರು ಜಿಲ್ಲೆಯ ಮುಳ್ಳಯ್ಯನಗಿರಿ ಮತ್ತು ಆವತಿ ಎಂಬ ಎರಡು ನದಿಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಒಂದುಗೂಡಿ "ವೇದಾವತಿ" ಎಂದು ಕರೆಸಿಕೊಂಡು ನಂತರ ಬಳ್ಳಾರಿ ಜಿಲ್ಲೆಯನ್ನು (ರೂಪನಗುಡಿಯಲ್ಲಿ) ಪ್ರವೇಶಿಸುತ್ತವೆ. ಈ ಪ್ರದೇಶದ ಶಾಸನಗಳು ಇದನ್ನು 'ಅಹರಿ' 'ಅಗ-ಹರಿ' (ಅಘಹರಿ=ಪಾಪವನ್ನು ತೊಳೆಯುವ) ಎಂದು ಕರೆದಿವೆ.

ತುಂಗಭದ್ರ ಇನ್ನೊಂದು ಉಪನದಿ ಚಿಕ್ಕಹಗರಿ ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮವಾಗಿ ಹರಪನಹಳ್ಳಿ ತಾಲೂಕಿನ ಅಂಜಗೇರಿಯಲ್ಲಿ ಈ ಪ್ರದೇಶವನ್ನು ಪ್ರವೇಶಿಸುತ್ತವೆ. ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ತಾಲೂಕುಗಳಲ್ಲಿ ಹರಿಯುವ ಇದು ಒಟ್ಟು ೪೦ ಕಿ.ಮೀ ಸಾಗಿ ತುಂಗಭದ್ರೆಯನ್ನು ಸೇರುತ್ತದೆ.

ಅದೇ ರೀತಿ ಚಿನ್ನಹಗರಿ ನದಿಯು ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮಗೊಂಡು ಕೂಡ್ಲಿಗಿಯಲ್ಲಿ ಉಗಮಗೊಂಡು ಕೂಡ್ಲಿಗಿಯ ದಕ್ಷಿಣಕ್ಕೆ ಕಲ್ಲಹಳ್ಳಿಯಲ್ಲಿ ಈ ಪ್ರದೇಶವನ್ನು ಪ್ರವೇಶಿಸುತ್ತದೆ. ಇದನ್ನು ಚಿತ್ರದುರ್ಗ ಜಿಲ್ಲೆಯಲ್ಲಿ "ಜನಗಿಹಳ್ಳ" ಎಂದು ಕರೆಯಲಾಗುತ್ತದೆ. ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳ ಗಡಿಯಾಗಿ ಪರಿಣಮಿಸಿರುವ ಇದು ಆಂಧ್ರ ಪ್ರದೇಶದ ರಾಯದುರ್ಗ ತಾಲೂಕಿನ ಉತ್ತರದಲ್ಲಿ ಹಗರಿ ನದಿಗೆ ಬಂದು ಕೂಡುತ್ತದೆ. ಪೆದ್ದವಂಕಾ ಎಂದು ಕರೆಯುವ ಒಂದು ನೀರಿನ ಹರಿಯು ತಾಮ್ರ ಪರ್ವತದಲ್ಲಿ ಹುಟ್ಟಿ ಕುಲುಮೆಯಲ್ಲಿ ಈ ಚಿನ್ನಹಗರಿ ಉಪನದಿಗೆ ಬಂದು ಸೇರುತ್ತದೆ.

**ಸಿಂಗಟಾಲೂರು ಜಲಾಶಯ**

ಪ್ರವಾಸಿಗರು ಇಂದು ಹೂವಿನ ಹಡಗಲಿಗೆ ಬಂದರೆ ನೋಡಲೇಬೇಕಾಗಿರುವ ಸುಂದರವಾದ ಮತ್ತು ರಮಣೀಯವಾದ ಒಂದು ತಾಣವೆಂದರೆ ಸಿಂಗಟಾಲೂರು ಜಲಾಶಯ. ಇದು ಹೂವಿನಹಡಗಲಿಯಿಂದ ಸುಮಾರು ೮ ಕಿ.ಮೀ ದೂರದಲ್ಲಿದೆ.

ಹಡಗಲಿ ತಾಲೂಕಿನ ಹುಲಗುಡ್ಡ ಎಂಬ ಪ್ರದೇಶದಲ್ಲಿ ಸಿಂಗಟಾಲೂರು ಏತ ನೀರಾವರಿ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಹೂವಿನ ಹಡಗಲಿ ತಾಲೂಕಿನ ಮತ್ತು ಗದಗ ಜಿಲ್ಲೆ ಮುಂಡರಗಿ ತಾಲೂಕು ಮತ್ತು ಕೊಪ್ಪಳ ಜಿಲ್ಲೆ ಮತ್ತು ತಾಲೂಕುಗಳಿಗೆ ನೀರಾವರಿ ಸೌಲಭ್ಯ (ಒಟ್ಟು ೪೮,೦೦೦ ಎಜರೆಗೆ) ಒದಗಿಸಿ ಕೃಷ್ಣೆಯ ಕ್ಷೇತ್ರದಲ್ಲಿ ಗಣನೀಯವಾದ ಅಭಿವೃದ್ಧಿ ಸಾಧಿಸುವುದು ಈ ಯೋಜನೆಯ ಮೂಲ ಉದ್ದೇಶವಾಗಿದೆ. ೧೯೯೨ ರಲ್ಲಿ ಸರ್ಕಾರಿ ಆದೇಶದ ಪ್ರಕಾರ ೯೨ ಮತ್ತು ೯೩ ದರಗಳ ಆಧಾರದ ಮೇಲೆ ೨೬೩ ಕೋಟಿ ರೂಪಾಯಿಗಳನ್ನು ಈ ಯೋಜನೆಯ ಅನುಷ್ಠಾನಕ್ಕಾಗಿ ವೆಚ್ಚ ಮಾಡಲಾಗಿದೆ. ಈ ಯೋಜನೆಯಿಂದ ತುಂಗಭದ್ರಾ ನದಿಗೆ ಸಿಂಗಟಾಲೂರು ಬಳಿ ೪೦೨ ಮೀ ಉದ್ದದ ಬ್ಯಾರೇಜ ಕಟ್ಟಿ ೯ ಕಿ.ಮೀ ಎತ್ತರದಷ್ಟು ನೀರನ್ನು ಶೇಕರಿಸಲಾಗುವುದು. ಶೇಖರಿಸಿದ ನೀರಿನಿಂದಾಗಿ ಮುಳುಗಡೆಯಾಗಿರುವ ಪ್ರದೇಶವು ೯೬೦ ಹೆಕ್ಟರ್‌ಗಳಾಗಿರುತ್ತದೆ.

ಈ ಯೋಜನೆಯಿಂದಾಗಿ ಮುಂಗಾರಿನ ೪೦ ಸಾವಿರ ಎಕರೆ ಮತ್ತು ಹಿಂಗಾರಿನಲ್ಲಿ ೬ ಸಾವಿರ ಎಕರೆ ಜಮೀನಿಗೆ ನೀರು ಲಭ್ಯವಾಗುತ್ತವೆ. ಅಂದರೆ ಎಡದಂಡೆಯ ಕಾಲುವೆಯಲ್ಲಿನ ೨೮ ಸಾವಿರ ಎಕರೆ

ಭೂಮಿಗೆ ಮತ್ತು ಬಲದಂಡೆ ಕಾಲುವೆಗೆ ಬರುವ ೨೦ ಸಾವಿರ ಎಕರೆ ಭೂಮಿಗೆ ನೀರು ದೊರೆಯುತ್ತದೆ. ಈ ಯೋಜನೆಗೆ ೧೯೯೨ ರಲ್ಲಿ ಆಡಳಿತಾತ್ಮಕವಾಗಿ ಮಂಜೂರಾತಿ ದೊರೆತಿದೆ. ಅಂದಿನ ಮುಖ್ಯಮಂತ್ರಿಯಾಗಿದ್ದ ಎಸ್.ಎಮ್. ಕೃಷ್ಣ ಅವರು ಶಿಲಾನ್ಯಾಸವನ್ನು ನೆರವೇರಿಸಿದರು. ಅನುಭವದ ಹಿರಿಯ ರಾಜಕಾರಣಿ ಗ್ರಾಮೀಣಾಭಿವೃದ್ಧಿ ಸಚಿವರಾಗಿದ್ದ ಮತ್ತು ನಂತರದಲ್ಲಿ ಎಂ.ಪಿ.ಪ್ರಕಾಶ ಅವರ ಸತತ ಪ್ರಯತ್ನದಿಂದ ಈ ಯೋಜನೆಗೆ ಚಾಲನೆ ದೊರೆಯಿತು. ಅಂದಿನಿಮದ ಕಟ್ಟಡದ ಕಾಮಗಾರಿ ಆರಂಭವಾಗಿ ೨೦೧೨ ರಲ್ಲಿ ಪೂರ್ಣಗೊಂಡಿತು. ಕರ್ನಾಟಕದ ಮುಖ್ಯ ಮಂತ್ರಿಗಳಾಗಿದ್ದ ಜಗದೀಶ ಶೆಟ್ಟರ ಅವರು ಈ ಯೋಜನೆಯನ್ನು ಡಿಸೆಂಬರ್ ೨೦೧೨ ರಲ್ಲಿ ಲೋಕಾರ್ಪಣೆ ಮಾಡಿದರು. ಇದರಿಂದ ರೈತ ವರ್ಗಕ್ಕೆ ಸಾಕಪ್ಪು ಉಪಯೋಗವಾಗಿದೆ.

**ವಾಯುಗುಣ ಮತ್ತು ಜೀವ ಸಂಕುಲ**

ಬಳ್ಳಾರಿ ಜಿಲ್ಲೆ ಬಿಸಿಲಿಗೆ ತುಂಬಾ ಪ್ರಸಿದ್ಧವಾಗಿದೆ. ಇಲ್ಲಿನ ತಾಪಮಾನ ಗರಿಷ್ಟ ಮಟ್ಟಕ್ಕಿದ್ದಾಗ ಹೊರಗಿನಿಂದ ಬಂದವರು ಇಲ್ಲಿರುವುದು ಕಷ್ಟ. ಹಡಗಲಿಯಲ್ಲಿನ ಬೇಸಿಗೆ ಕಾಲವು ಫೆಬ್ರುವರಿ ಅಂತ್ಯದಿಂದ ಆರಂಭವಾಗಿ ಜೂನ್ ತಿಂಗಳವರೆಗೆ ಇರುತ್ತದೆ. ಆಗ ಶಾಖವು ಸರಾಸರಿ ೧೬.೭° ದಿಂದ ೪೩.೯° ವರೆಗೆ ಇರುತ್ತದೆ. ಜುಲೈ ತಿಂಗಳಲ್ಲಿ ಆರಂಭವಾಗುವ ಮಳೆಗಾಲ ನವೆಂಬರ ತಿಂಗಳವರೆಗೆ ಇರುತ್ತದೆ. ಮಳೆಯ ವಾರ್ಷಿಕ ಸರಾಸರಿ.೬೧೫,೫ ಮೀ.ಮೀ ಇರುತ್ತದೆ. ನವೆಂಬರ್ ಕೊನೆಯಿಂದ ಫೆಬ್ರುವರಿಯವರೆಗೆ ಚಳಿಗಾಲವಿರುತ್ತದೆ. ಶುಷ್ಕ ವಾತಾವರಣವಿರುವ ಈ ಪ್ರದೇಶ ಮನುಷ್ಯರ ವಾಸಕ್ಕೆ ಅತ್ಯಂತ ಯೋಗ್ಯವಾಗಿದೆ.

ಈ ಪ್ರದೇಶದ ಕಾಡು ಹಾಗೂ ಬೆಟ್ಟಗುಡ್ಡಗಳಲ್ಲಿ ಒಟ್ಟು ಜಾನುವಾರುಗಳ ಸಂಖ್ಯೆ ೧,೯೪,೨೧೩ ರಷ್ಟಿದೆ. ಇಲ್ಲಿ ಚಿರತೆ, ಕರಡಿ, ಕಾಡುಹಂದಿ, ಮುಳ್ಳುಹಂದಿ, ನರಿ, ಜಿಂಕೆ, ತೋಳ, ನೀರುಹಂದಿ ಮೊದಲಾದ ಕಾಡು ಪ್ರಾಣಿಗಳು ಹಾಗೂ ನವಿಲು, ಕಾಗೆ, ಗೂಬೆ, ಗೊರವಂಕ, ಕೌಜ, ನೀರುಕೋಳಿ, ಗುಬ್ಬಿ, ಕಿಂಗ್‌ಫಿಷರ್ ಮುಂತಾದ ಪಕ್ಷಿಗಳು ಕಂಡುಬರುತ್ತವೆ. ಅಲ್ಲದೆ ತುಂಗಭದ್ರ ನೀರಿನಲ್ಲಿ ಮೊಸಳೆ, ಮೀನು, ಕಪ್ಪೆ ಮೊದಲಾದ ಜಲಚರಗಳಿವೆ. ಅಲ್ಲದೆ ಮೊಲ, ಜಿಂಕೆಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ನಾಗರ, ಮಿಡಿನಾಗರ, ಕೆರೆ, ಹಸಿರು, ಬಿಲ್ಲುರಗ, ನೂಲಾವು, ಪೆಯರ, ಹೆಬ್ಬಾವು, ಮಣ್ಣುಮುಕ್ಕಹಾವು ಹಾಗೂ ಕಪ್ಪು ಮತ್ತು ಕೆಂಪುಚೇಳು, ಜರಿ ಮೊದಲಾದ ವಿಷಜಂತುಗಳಿವೆ.

**ಅರಣ್ಯ ಮತ್ತು ಖನಿಜ ಸಂಪನ್ಮೂಲ**

ಈ ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಅರಣ್ಯ ಪ್ರದೇಶವು ೪, ೭೩೮ ಹೆಕ್ಟರ್‌ಗಳು ಮಾತ್ರ. ಅಂದರೆ ಇಲ್ಲಿ ಶೇ. ೪೦ ರಷ್ಟು ಅರಣ್ಯವಿದೆ. ಈ ಪ್ರದೇಶವು ಮುಂಗಾರು ಹಾಗೂ ಹಿಂಗಾರು

ಮಳೆಯ ಸೆರಗಿನ ಪ್ರದೇಶ. ಆದುದ್ದರಿಂದ ಅಲ್ಬೇನಿಯಾ, ಅಕೇಶಿಯಾ, ಅರಾಜಿಕ್, ಯುಪೋರ್, ಬಯಾಸ ಜಾತಿಗಳಿಗೆ ಸೇರಿದ ಮರಗಿಡಗಳು ಇಲ್ಲಿ ಹೆಚ್ಚಾಗಿ ಬೆಳೆಯುತ್ತವೆ. ಇಂತಹ ಮರಗಿಡಗಳನ್ನು ಅವಲಂಬಿಸಿದ ಪ್ರಾಣಿಗಳಾದ ಮೊಲ, ಜಿಂಕೆಯಂತಹ ಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ಇದಕ್ಕೆ ಪೂರಕವಾಗಿ ಹೇಳುವುದಾದರೆ ಹಡಗಲಿಗೆ ಅತಿ ದೂರದಲ್ಲಿರುವ ತೆಕ್ಕಲಕೋಟೆ, ಸಂಗನಕಲ್ಲು, ಹಳ್ಳೂರಿನಲ್ಲಿ ಅಲ್ಪಿಯುಯಾ, ಅಕೇಶಿಯಾ ಗುಂಪಿಗೆ ಸೇರಿದ ಸಸ್ಯಗಳು ಪ್ರಾಗೈತಿಹಾಸಿಕ ಕಾಲಘಟ್ಟದಲ್ಲಿ ಬೆಳೆಯುತ್ತಿದ್ದವು. ತೆಕ್ಕಲಕೋಟೆ, ಸಂಗನಕಲ್ಲು, ಹಳ್ಳೂರಿನಲ್ಲಿ ದೊರೆತಿರುವ ಇದ್ದಲಿನಿಂದ ಈ ಸಸ್ಯಗಳನ್ನು ಗುರುತಿಸಲಾಗಿದೆ.[೧೫] ಇಂದಿಗೂ ಸಹ ಉರುವಲು ಮತ್ತು ಬೇಸಾಯದ ಉಪಕರಣಗಳಿಗೆ ಇವುಗಳನ್ನು ಬಳಸುತ್ತಾರೆ. ಈ ಪ್ರದೇಶವು ಕಪ್ಪು ಎರೆಮಣ್ಣಿನಿಂದ ಕೂಡಿದ್ದು, ಇದು ಮೇಲೆ ತಿಳಿಸಿದ ಕುರುಚಲು ಗಿಡಗಳ ಪ್ರದೇಶದಿಂದ ಅವಶ್ಯಕವಾಗಿದೆ.

ಹೂವಿನ ಹಡಗಲಿ ತಾಲೂಕು ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣು ಮತ್ತು ಫಲವತ್ತಾದ ಕಪ್ಪುಕೊಡಿ ಮಣ್ಣು ಹರಡಿದೆ. ಮರಳು ಮಿಶ್ರಿತ ಕೆಂಪುಮಣ್ಣು ಸಾಮಾನ್ಯವಾಗಿ ತುಂಗಭದ್ರ–ಹಗರಿ, ನದಿ ಪ್ರದೇಶಗಳಲ್ಲಿ ಕಂಡುಬರುತ್ತದೆ. ಈ ತಾಲೂಕಿಗೆ ಹೊಂದಿಕೊಂಡಿರುವ ಇದೇ ಜಿಲ್ಲೆಯ ವಿವಿಧ ಭಾಗಗಳಲ್ಲಿ ಹೇರಳವಾದ ಖನಿಜ ಸಂಪತ್ತು ದೊರೆಯುತ್ತದೆ. ಈ ಭೂಭಾಗವನ್ನು "ಖನಿಜಗಳ ನಿಧಿ" ಎಂದರೂ ತಪ್ಪಿಲ್ಲ. ಖನಿಜಗಳಲ್ಲಿ ಅತಿ ಮುಖ್ಯವಾದುದರಿಂದ ಕಬ್ಬಿಣದ ಅದಿರು. ಪ್ರಾಚೀನ ಕಾಲದಿಂದಲೂ ಇದ ಉಪಯೋಗದಿಂದ ಮಾನವನು ನಗರೀಕರಣ ಸಂಸ್ಕೃತಿಯೆಡೆಗೆ ಹೆಜ್ಜೆ ಹಾಕಿದನು. ಇಲ್ಲಿ ದೊರೆಯುವ ವಿವಿಧ ಬಗೆಯ ಖನಿಜಗಳು ವಿವರ ಇಂತಿದೆ. ಹಡಗಲಿಯಲ್ಲಿ ಪ್ರಧಾನವಾಗಿ ಗ್ರಾನೈಟ್ ಶಿಲೆ ದೊರೆಯುತ್ತದೆ. ನಾಗಲಾಪುರ, ರಾಜಾಪುರ, ಗಾದಿಗನೂರು, ಅಂತಮನಾಳ, ರಾಮದುರ್ಗ, ಕಡೆಬಾಗಿಲುಗಳಲ್ಲಿ[೧೬] ಬೆಣಚುಕಲ್ಲು ದೊರೆಯುತ್ತದೆ. ದೇವಗೊಂಡನಹಳ್ಳಿಯಲ್ಲಿ ವಜ್ರ ಮತ್ತು ರೆಡ್ ಓಕರ್, ಜಾನಿಕುಂಟೆ, ಜಂಭುನಾಥನಹಳ್ಳಿ, ವ್ಯಾಸನಕೆರೆ, ಕರಡಿಕೊಳ್ಳ ಮೊದಲಾದವು ಹಾಗೂ ಸಂಡೂರು, ನಂದಿಹಳ್ಳಿ, ಹೊಸಪೇಟೆ ಸುತ್ತಮುತ್ತ ಕಬ್ಬಿಣದದಿರು ಸಿಗುತ್ತದೆ. ಮೆಟ್ರಿ ಬಳಿ ಸತು, ತಾಳೂರು, ಉತ್ತನೂರು, ಹೀರೆಹಡಗಲಿ, ಚಿನ್ನಹಳ್ಳಿಗಳಲ್ಲಿ ಜಿಪ್ಸಮ್ ತುಂಬರಗುಡ್ಡ ಮತ್ತಿತ್ತರೆಡೆ, ಜೇಡಿಮಣ್ಣು ಹಾಗೂ ತಮರಿ, ರಾಮಘಡ ಬಲದ ಗುಡ್ಡಗಳಲ್ಲಿ ಹಳದಿ ಓರಕ್, ತಿಮ್ಮಾಪುರದಲ್ಲಿ ಬೆಸಾಲ್ಟ್ ಶಿಲೆ, ರಾಯಘಡ, ದೇವಗಿರಿ, ಸುಬ್ರಾಯನಹಳ್ಳಿ ಮ್ಯಾಂಗನೀಸ್ ಮತ್ತು ಬಂಗಾರದ ಅದಿರು ಶೃಂಗಮರಡಿ, ಬೆಟಗೇರಿ, ತಾರಾನಗರ, ಕಂಜೂರುಗಳಲ್ಲಿ ದೊರೆಯುತ್ತದೆ.[೧೭] ತಾಮ್ರವು ಹರಪನಹಳ್ಳಿ, ಹಿನ್ನಾಪುರ, ರಾಮಘಡ, ತಾಮ್ರಪರ್ವತಗಳಲ್ಲಿ ಸಿಗುತ್ತದೆ. ಅದೇ ರೀತಿ ಮ್ಯಾಗನೆಸ್ಟಟ್ ಅದಿರು ತೋರಣಗಲ್ಲಿನಲ್ಲಿ ಸುಣ್ಣದಕಲ್ಲು ತೋರಣಗಲ್ಲು, ಮೆಟ್ರಿ, ಉಬ್ಬಲಗಂಡಿ, ದೇವಲಾಪುರ, ಮಲ್ಲಪ್ಪನ ಗುಡಿಗಳಲ್ಲಿ ದೊರೆಯುತ್ತದೆ.

ಈ ಮೇಲೆ ಕಾಣಿಸಿದ ಮಣ್ಣು ಕೃಷಿ ಚಟುವಟಿಕೆಗಳನ್ನು ನಡೆಸಲು ಸಹಕಾರಿಯಾಯಿತು. ಇಲ್ಲಿ ದೊರೆಯುವ ಖನಿಜ ಸಂಪತ್ತು ಅಂದಿನಿಂದ ಇಂದಿನವರೆಗೆ ವಿವಿಧ ರೀತಿಯಲ್ಲಿ ಅಂದರೆ ಮಾನವ ಸಂಸ್ಕೃತಿಯ ವಿಕಾಸದಲ್ಲಿ ಉಪಯುಕ್ತವಾಗಿದೆ.

**ಕೃಷಿ ಉತ್ಪನ್ನಗಳು**

ಹೂವಿನ ಹಡಗಲಿಯಲ್ಲಿನ ಜನರ ಪ್ರಮುಖ ವೃತ್ತಿ ಕೃಷಿ. ಇಲ್ಲಿನ ಭೂಮಿಯು ಉಸುಕು ಮಿಶ್ರಿತ ಕೆಂಪುಮಣ್ಣು ಮತ್ತು ಜಿಗಟು ಮಣ್ಣಿನಿಂದ ಕೂಡಿದೆ. ಅಂದರೆ ತುಂಗಭದ್ರ ನದಿಯ ಬಯಲು ಪ್ರದೇಶದಲ್ಲಿ ಕೆಂಪು ಮಿಶ್ರಿತ ಮರಳಿನಿಂದ ಕೂಡಿದ ಜೇಡಿ ಮಣ್ಣಿನ ಫಲವತ್ತಾದ ಪ್ರದೇಶವಿದ್ದರೆ ಉಳಿದಂತೆ ಕಪ್ಪು ಮಣ್ಣಿನ ಪ್ರದೇಶವಿದೆ. ಈ ಪ್ರದೇಶದಲ್ಲಿ ವಾರ್ಷಿಕ ಮಳೆಯ ಪ್ರಮಾಣವು ೬.೧೫.೫.ಮೀ.ಮೀ ನಷ್ಟಿದೆ. ಇಲ್ಲಿನ ರೈತರು ಹೆಚ್ಚಾಗಿ ಮಳೆಯನ್ನೇ ಆಧರಿಸಿದ್ದಾರೆ. ಉಳಿದಂತೆ ಕೆರೆಗಳು, ಬಾವಿಗಳು, ಮತ್ತು ಕೊಳವೆ ಬಾವಿಗಳಿಂದ ನೀರನ್ನು ಪಡೆದು ಕೃಷಿಯಲ್ಲಿ ತೊಡಗಿಸಿದ್ದಾರೆ. ಹೂವಿನ ಹಡಗಲಿ ತಾಲೂಕು ಒಟ್ಟು ೯೪,೮೫೩ ಹೆಕ್ಟರ್ ಭೂಮಿಯನ್ನು ಹೊಂದಿದ್ದು ಇದರಲ್ಲಿ ೪,೯೨೮ ಹೆಕ್ಟರ್ ಭೂಮಿ ಅರಣ್ಯದಿಂದ ಆವೃತವಾಗಿದೆ. ಇತ್ತಿಚೀನ ಅಂಕಿ ಅಂಶಗಳ ಪ್ರಕಾರ ಸಾಗುವಳಿಗೆ ಲಬ್ಯವಿಲ್ಲದ ಭೂಮಿ ೧೨,೧೫೭ಹೆಕ್ಟರ್ ಇವೆ. ಬಂಜರು ಭೂಮಿ ೨,೭೬೬ ಹೆಕ್ಟರ್ ಇದೆ. ಸಾಗುವಳಿಗೆ ಯೋಗ್ಯವಾದ ಬಂಜರು ಭೂಮಿ ೧೭,೪೮೧ ಹೆಕ್ಟರ್ ಇದ್ದರೆ ಒಟ್ಟು ಸಾಗುವಳಿಗೆ ಲಭ್ಯವಿರುವ ಭೂಮಿ, ೭೫,೫೬೧ ಹೆಕ್ಟರ್ ಇದೆ. ಹಾಗೆಯೇ ತಾಲೂಕಿನ ಒಟ್ಟು ಭೂಮಿಯಲ್ಲಿ ೩೧೬೧ ಹೆಕ್ಟರ್ ಪ್ರದೇಶದಲ್ಲಿ ಏತ ನೀರಾವರಿ, ೧೭,೧೩೬ ಹೆಕ್ಟರ್ ಪ್ರದೇಶದಲ್ಲಿ ಕೊಳವೆ ಬಾವಿಯಿಂದ ಮತ್ತು ೫೯,೫೫೭ ಹೆಕ್ಟರ್ ಪ್ರದೇಶವು ಮಳೆಯಾಶ್ರಯದಿಂದ ಕೃಷಿಯನ್ನು ಕೈಗೊಂಡಿರುವುದು ಕಂಡು ಬರುತ್ತದೆ. ಬೇಸಿಗೆ ನೀರಾವರಿ ಯೋಜನೆಯಡಿ ೪,೪೫೦ ಹೆಕ್ಟರ್ ಭೂಮಿಯನ್ನು ಮೀಸಲಿಡಲಾಗಿದೆ. ಇವುಗಳೆಲ್ಲವನ್ನು ಗಮನಿಸಿದಾಗ ಇಲ್ಲಿ ಹೆಚ್ಚಾಗಿ ಒಣ ಬೇಸಾಯ ಪದ್ಧತಿ ಹೆಚ್ಚಾಗಿರುವುದು ಕಂಡುಬರುತ್ತದೆ. ೨೦೧೨ರಿಂದ ಈಚೆಗೆ ತುಂಗಭದ್ರ ನದಿಯಿಂದ ಏತ ನೀರಾವರಿ ಯೋಜನೆಯಲ್ಲಿ ತಾಲೂಕಿನಲ್ಲಿ ನೀರಾವರಿಯ ಪ್ರಮಾಣ ಹೆಚ್ಚಾಗಿರುವುದನ್ನು ಕಾಣುತ್ತೇವೆ.

ಇಲ್ಲಿ ಮುಖ್ಯವಾಗಿ ಏಕದಳ, ದ್ವಿದಳ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಹತ್ತಿ, ಜೋಳ, ಭತ್ತ, ಕಬ್ಬು, ಶೇಂಗಾ, ಮೆನಸಿನಕಾಯಿ, ಸೂರ್ಯಕಾಂತಿ, ರಾಗಿ, ಸಜ್ಜೆ, ಮುಸುಗಿನ ಜೋಳ, ತೊಗರಿ ಮುಂತಾದ ಆಹಾರ ಬೆಳೆಗಳನ್ನು ಬೆಳೆಯುತ್ತಾರೆ. ಜೊತೆಗೆ ತೋಟಗಾರಿಕೆ ಬೆಳೆಗಳಾದ ಹಣ್ಣು, ತರಕಾರಿ, ವೀಳ್ಯದೆಲೆ, ಬಾಳೆ, ಮಲ್ಲಿಗೆಹೂ ಮುಂತಾದವುಗಳನ್ನು ಸಹ ಬೆಳೆಯುತ್ತಾರೆ. ಈ ಹಿಂದೆ ಹಡಗಲಿಯಲ್ಲಿ ಹೂವಿನ ವ್ಯಾಪಾರವೇ ಪ್ರಮುಖ ವಾಣಿಜ್ಯವಾಗಿತ್ತು.

**ಹೂವಿನಹಡಗಲಿ ತಾಲೂಕಿನ ವಿವಿಧ ಜಲಮೂಲಗಳ ಅಡಿಯಲ್ಲಿ ಬರುವ ನೀರಾವರಿ ಭೂಮಿ**

| ಕ್ರಸಂ | ವಿವರಗಳು | ಪ್ರದೇಶ ಹೆಕ್ಟೇರು |
|---|---|---|
| ೧ | ಏತನೀರಾವರಿ | ೩,೬೩೧ |
| ೨ | ಕೆರೆಗಳು | ೩೦೬ |
| ೩ | ಬಾವಿಗಳು | ೧,೨೫೫ |
| ೪ | ಕೊಳವೆ ಬಾವಿಗಳು | ೧೭,೧೫೬ |

ಒಟ್ಟು ನೀರಾವರಿಗೆ ಒಳಪಟ್ಟ ಪ್ರದೇಶ ೨೨.೩೭೯ ಹೆಕ್ಟರ್ (೨೦೧೧-೧೨ನೇ ಸಾಲಿನೆ.ಎಸ್.ಸಿ.ಆರ್ ವರದಿ)

ತುಂಗಭದ್ರಾ ಮತ್ತು ಅದರ ಉಪನದಿಗಳ ಹಾಗೂ ಹಳ್ಳ ಕೆರೆಗಳ ನೀರನ್ನು ಬಳಸಿಕೊಂಡು ಇಲ್ಲವೆ ಮಳೆಯಾಶ್ರಿತ ನೀರಾವರಿ ಸಹಾಯದಿಂದ ಕೃಷಿಕರು ವ್ಯವಸಾಯ ಕೈಗೊಂಡಿದ್ದಾರೆ. ಈ ರೀತಿಯ ಎಲ್ಲಾ ಸವಲತ್ತುಗಳ ಈ ಭೂಭಾಗದಲ್ಲಿ ಇದ್ದುದ್ದರಿಂದ ಹಡಗಲಿ, ಮಾಗಳಿ, ಕುರುವತ್ತಿ, ಮೈಲಾರ, ಬೆಟ್ಟದ ಮಲ್ಲೇಶ್ವರ ಮೊದಲಾದ ಸ್ಥಳಗಳಲ್ಲಿ ಆದಿಶಿಲಾಯುಗದಿಂದ ಆದಿ ಮಾನವರು ವಾಸಿಸಿದ್ದಾರೆ. ಅಲ್ಲದೆ ಮುಂದೆ ಅಂದರೆ ಚಾರಿತ್ರಿಕ ಕಾಲದಲ್ಲಿ ವಿಜಯನಗರ ಸೇರಿದಂತೆ ಇತರ ಪ್ರಬಲ ರಾಜ್ಯಗಳನ್ನು ಕಟ್ಟಲು ಇಲ್ಲಿನ ಭೌಗೋಳಿಕ ಪರಿಸರವು ಸಹಾಯಕವಾಗಿತು.

**ಚಾರಿತ್ರಿಕ ಹಿನ್ನೆಲೆ**

ಭಾರತದ ಇತಿಹಾಸದಲ್ಲಿ ಕರ್ನಾಟಕವು ಅತ್ಯಂತ ಪ್ರಾಚೀನ ಮತ್ತು ಭವ್ಯವಾದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಭರತ ಖಂಡದಲ್ಲಿ ಸುಂದರವಾಗಿ ಅರಳಿರುವ ಸಂಸ್ಕೃತಿ ಕುಸುಮಗಳಲ್ಲಿ ಕರ್ನಾಟಕದ ಸ್ಥಾನ ಬಹಳ ದೊಡ್ಡದು ಮತ್ತು ವಿಶಿಷ್ಟವಾದುದು. ಸಾಮ್ರಾಜ್ಯ ನಿರ್ಮಾಣ ಮತ್ತು ಅವುಗಳ ವ್ಯವಸ್ಥೆಯಲ್ಲಿ, ಧಾರ್ಮಿಕ ದರ್ಶನದ ದಿವ್ಯದೃಷ್ಟಿಯಲ್ಲಿ ಸಾಹಿತ್ಯ ದೃಷ್ಟಿ ರಸ ಮಾರ್ಗದಲ್ಲಿ ಶಬ್ದ ಸಂಗೀತವಾದಿಗಳ ಕಲೋಪಾಸನೆಗಳಲ್ಲಿ ಹೀಗೆ ಜೀವನದ ಎಲ್ಲಾ ರಂಗಗಳಲ್ಲಿಯೂ ಕರ್ನಾಟಕದ ಸಾಧನೆ ಸಾರ್ಥಕತೆಯನ್ನು ಪಡೆದಿದೆ. ಕರ್ನಾಟಕದ ಪ್ರಾಚೀನ ಇತಿಹಾಸವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಆದರೂ ಕ್ರಿ.ಶ.ಪೂ ಪ್ರಾರಂಭದಲ್ಲಿ ಸಾತವಾಹನರು ಪ್ರಬಲವಾದ ರಾಜಕೀಯ ಶಕ್ತಿಯಾಗಿ ಕನ್ನಡ ರಾಜ್ಯವನ್ನು ಆಳಿ ಈ ಸಂಸ್ಕೃತಿಯನ್ನು ಬೆಳೆಸಲು ಕಾರಣರಾದರು. ಕರ್ನಾಟಕವನ್ನಾಳಿದ ಮೊಟ್ಟ ಮೊದಲ ಪ್ರಮುಖ ರಾಜವಂಶ ಇದು. ಇವರು ಕ್ರಿ.ಶ. ೧ನೇ ಶತಮಾನದಿಂದ ೩ನೇ ಶತಮಾನದವರೆಗೆ ಆಳಿದರು. ಇವರ ಮೂಲ ನಿವಾಸ "ಸಾತವಾಹನಿಹಾರ" ಅಂದರೆ ಅದು ಈಗಿನ ಧಾರವಾಡ ಮತ್ತು ಬಳ್ಳಾರಿ

ಜಿಲ್ಲೆಗಳ ಭಾಗ. ಕ್ರಿ.ಶ. ೪ನೇ ಶತಮಾನದ ಕಾಲಕ್ಕೆ ಕರ್ನಾಟಕದಲ್ಲಿ ಎರಡು ರಾಜ್ಯಗಳು ಸ್ಥಾಪನೆಯಾದವು. ಕರ್ನಾಟಕದ ಉತ್ತರ ಭಾಗದ ಬಹಳಷ್ಟು ಪ್ರದೇಶವನ್ನೊಳಗೊಂಡ ಮತ್ತು ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಬನವಾಸಿಯನ್ನು ರಾಜಧಾನಿಯನ್ನಾಗಿಸಿಕೊಂಡು ಸ್ಥಾಪಿತವಾದ ಕದಂಬ ರಾಜ್ಯ ಒಂದಾದರೆ, ಇನ್ನೊಂದು ಕರ್ನಾಟಕದ ದಕ್ಷಿಣ ಭಾಗವನ್ನು ಒಳಗೊಂಡ ತಲಕಾಡನ್ನು ರಾಜ್ಯಧಾನಿಯನ್ನಾಗಿಸಿಕೊಂಡು ಗಂಗರಾಜ್ಯ ಈ ಎರಡು ರಾಜ್ಯಗಳು ಕನ್ನಡ ಸಂಸ್ಕೃತಿ ಬೆಳೆಯಲು ಭದ್ರವಾದ ತಳಹದಿಯನ್ನು ಹಾಕಿದವು. ಮುಂದೆ ೬ನೇ ಶತಮಾನದ ಹೊತ್ತಿಗೆ ಚಾಲುಕ್ಯ ಅರಸನಿಂದ ವಿಸ್ತರಿಸಲ್ಪಟ್ಟ ರಾಷ್ಟ್ರಕೂಟ ನೃಪತುಂಗನ ಕವಿರಾಜಮಾರ್ಗ ಎಂಬ ಗದ್ಯ ಕೃತಿಯಲ್ಲಿ ಹೇಳಿದ "ಕಾವೇರಿಯಿಂದಮಾ ಗೋದಾವರಿವಿರ್ದ ನಾಡಾದ ಕನ್ನಡ" ಎಂದು ಕನ್ನಡ ನಾಡಿನ ಗಡಿಯನ್ನು ಗುರುತಿಸಲಾಗಿದೆ.

ಹೂವಿನ ಹಡಗಲಿಯನ್ನು ಆಡಳಿತಕ್ಕೆ ಒಳಪಡಿಸಿಕೊಂಡ ಕಲ್ಯಾಣ ಚಾಲುಕ್ಯರಲ್ಲಿ ಇಮ್ಮಡಿ ಜಯಸಿಂಹ ಮೊದಲಿಗನಾಗಿದ್ದಾನೆ. ಇಮ್ಮಡಿ ತೈಲಪನು ೨೪ ವರ್ಷಗಳ ಕಾಲ (ಕ್ರಿ.ಶ.೯೭೩-೯೯೭) ರ ವರೆಗೆ ರಾಜ್ಯವಾಳಿದ ನಂತರ ಕ್ರಿ.ಶ. ೯೯೭ರ ಸುಮಾರಿಗೆ ಇತನ ಹಿರಿಯ ಮಗ ಸತ್ಯಾಶ್ರಯನು ಪಟ್ಟಕ್ಕೆ ಬಂದನು. ಈತನು ಕ್ರಿ.ಶ.೯೯೭-೧೦೦೮ರ ವರೆಗೆ ರಾಜ್ಯವಾಳಿದನು. ಸತ್ಯಾಶ್ರಯನಿಗೆ ಗಂಡು ಮಕ್ಕಳಿಲ್ಲದ ಕಾರಣ ಆತನ ಉತ್ತರಾಧಿಕಾರಿಯಾಗಿ ದಶವರ್ಮನ ಮಗನಾದ ೫ನೇ ವಿಕ್ರಮಾದಿತ್ಯನು ಕ್ರಿ.ಶ ೧೦೦೯ರಲ್ಲಿ ಪಟ್ಟಕ್ಕೆ ಬಂದನು. ಈತನ ನಂತರ ಈತನ ತಮ್ಮನಾದ ಅಯ್ಯಣ್ಣ ಪಟ್ಟಕ್ಕೆ ಬಂದನು. ಆದರೆ ಇತನ ಆಳ್ವಿಕೆಯ ಬಗೆಗೆ ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಆದರೆ ವಿಕ್ರಮಾದಿತ್ಯ ತಂಗಿಯು ಇಮ್ಮಡಿ ಜಯಸಿಂಹನ ಅಕ್ಕನೂ ಆಗಿದದ್ ಅಕ್ಕಾದೇವಿಯೂ ಅಯ್ಯನ ತರುವಾಯ ರಾಜ್ಯವಾಳಿದಳೆಂದು ಅನೇಕ ಶಾಸನಗಳು ಉಲ್ಲೇಖಿಸಿವೆ. ನಂತರ ಇಮ್ಮಡಿ ಜಯಸಿಂಹನು ಅಧಿಕಾರಕ್ಕೆ ಬಂದನು. ಈತನು ಜಗದೇಕಮಲ್ಲನೆಂದು ಪ್ರಸಿದ್ಧನಾದನು. ಮುಖ್ಯವಾಗಿ ಇವನ ಆಳ್ವಿಕೆಯಲ್ಲಿ ಹಲವಾರು ಜನ ಸಾಮಂತರು, ಮಾಂಡಳಿಕರು, ಮಹಾಮಂಡಳೇಶ್ವರರು ಹಡಗಲಿಯನ್ನು ಆಳಿರುವುದು ಕಂಡುಬರುತ್ತದೆ. ಅವುಗಳು ಈ ಕೆಳಗಿನಂತಿವೆ. ಹಡಗಲಿಯ ಕಾಂತೆಬೆನ್ನೂರು ಎಂಬ ಗ್ರಾಮದಲ್ಲಿ ಉಡಚವ್ವ ದೇವಾಲಯದ ಬಳಿ ಬಿದ್ದಿರುವ ಕಲ್ಲಿನ ಕಂಬದಲ್ಲಿನ ಶಾಸನದಲ್ಲಿ "ಕ್ರಿ.ಶ.೧೦೨೫ ರಲ್ಲಿ ಚಾಲುಕ್ಯ ದೊರೆ ಜಗದೇಕಮಲ್ಲನ ಆಳ್ವಿಕೆಯಲ್ಲಿ ಮಧುವರ್ಮದೇವನು ಬೆಣ್ಣೆವೂರು-೧೨ನ್ನು ಆಳುತ್ತಿದ್ದಂತೆ ಉಲ್ಲೇಖವಿದೆ. ಇತನ ಇನ್ನೊಬ್ಬ ಮಾಂಡಲೀಕನಾದ ನೊಳಂಬ ಪಲ್ಲವಪೆರ್ಮಡಿಯು ಕದಂಬಳಿಗೆ -೧೦೦೦, ಒಲ್ಲಕುಂದೆ-೩೦೦, ಕೋಗಳಿ-೫೦೦ನ್ನು ಆಳುತ್ತಿದ್ದ ಉಲ್ಲೇಖವು ಮಾನ್ಯರಮಸಲವಾಡ ಎಂಬ ಗ್ರಾಮದಲ್ಲಿನ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನ ತಿಳಿಸುತ್ತದೆ. ಅಯ್ಯಣಭೀವ, ಕೋಗರಸ, ಮಾರಗಾವುಂಡ ಮತ್ತಿತ್ತರರು ಕೋಗಳಿ-೫೦೦ರಲ್ಲಿ ಮೊಸಳೆಮಡುವನ್ನು ಗುರುದೇವನು ಆಳುತ್ತಿದ್ದನ್ನು ಸಹ ಈ ಶಾಸನ

ಉಲ್ಲೇಖಿಸಿದೆ. ಮಲ್ಲಯ್ಯನ ಗುಡ್ಡದ ಕ್ರಿಶ.೧೦೧೬ರ ಶಾಸನದ ಕಾಲಕ್ಕೆ ನೊಳಂಬರು ಇಲ್ಲಿನ ಸಾಮಂತರಾಗಿ ನೊಳಂಬವಾಡಿ-೩೦೦ ಕುದಿಹರಲು-೭೦, ಕರಿವಿಡಿ-೩೦ನ್ನು ಆಳುತ್ತಿದ್ದರು ಎಂಬುದು ಶಿರಗುಪ್ಪದಲ್ಲಿ ದೊರೆತಿರುವ ಶಾಸನದಿಂದ ತಿಳಿಯುತ್ತದೆ. ಸೋಗಿ ಗ್ರಾಮದ ಕಲ್ಲೇಶ್ವರ ದೇವಾಲಯದ ಹೊರಗಡೆ ಇರುವ ಶಾಸನದಲ್ಲಿ ಚಾಲುಕ್ಯ ದೊರೆ ಜಗದೇಕಮಲ್ಲದೇವನ ಆಳ್ವಿಕೆಯಲ್ಲಿ ಉದಯಾದಿತ್ಯನು ಕೆಲವು ನಾಡುಗಳನ್ನು ಆಳುತ್ತಿರುವುದನ್ನು ಉಲ್ಲೆಖಿಸಲಾಗಿದೆ. ಹೀಗೆ ಕರ್ನಾಟಕದಲ್ಲಿ ಇಮ್ಮಡಿ ಜಯಸಿಂಹನ ಆಳ್ವಿಕೆಯ ಸಂದರ್ಭದಲ್ಲಿ ಹಡಗಲಿಯಲ್ಲಿ ಈತನ ಸಾಮಂತರು ಕೆಲವು ಭಾಗಗಳಲ್ಲಿ ಆಳ್ವಿಕೆ ನಡೆಸಿರುವುದನ್ನು ಶಾಸನಗಳಿಂದಲೇ ತಿಳಿದುಬರುತ್ತದೆ.

ಹಡಗಲಿ ತಾಲೂಕಿನ ಕಾಂತೆಬೆನ್ನೂರು, ಮಾನ್ಯರಮಸಲವಾಡ ಮತ್ತು ಸೋಗಿ ಗ್ರಾಮಗಳಲ್ಲಿ ದೊರೆತ ಶಾಸನಗಳಿಂದ ಇಮ್ಮಡಿ ಜಯಸಿಂಹನ ಮಾಂಡಲೀಕರು ಹಡಗಲಿಯಲ್ಲಿ ತಮ್ಮ ಆಳ್ವಿಕೆಯನ್ನು ನಡೆಸಿದ್ದರು ಎಂಬುದು ತಿಳಿದು ಬರುತ್ತದೆ. ಇಮ್ಮಡಿ ಜಯಸಿಂಹನಿಗೆ ಸುಗ್ಗಲದೇವಿ ಎಂಬ ಹೆಂಡತಿಯಿದ್ದಳು. ಈಕೆ ವೀರಶೈವ ಶರಣ ದೇವರ ದಾಸಿಮಯ್ಯನ ಭಕ್ತೆಯಾಗಿದ್ದಳು. "ದೇವರ ದಾಸಿಮಯ್ಯನ ಪುರಾಣ"ದಲ್ಲಿ ದೇವರ ದಾಸಿಮಯ್ಯನು ಇಮ್ಮಡಿ ಜಯಸಿಂಹನನ್ನು ಲಿಂಗಾಯತ ಮತಕ್ಕೆ ಮತಾಂತರಗೊಳಿಸಿದನೆಂದು ಉಲ್ಲೇಖಿಸಲಾಗಿದೆ. ಇಮ್ಮಡಿ ಜಯಸಿಂಹನ ಹಲವಾರು ಶಿಲಾ ಶಾಸನಗಳು, ತಾಮ್ರಪಟಗಳು ಉಪಲಬ್ದವಿದ್ದು ಅವು ಕ್ರಿಶ. ಏಪ್ರಿಲ್, ಮೇ ೧೦೧೮ ರಿಂದ ಅಕ್ಟೋಬರ್, ನವೆಂಬರ್ ೧೦೪೨ರ ವರೆಗಿನವುಗಳಾಗಿವೆ. ಈತನ ನಂತರ ಈತನ ಮಗನಾದ ಮೊದಲನೇ ಸೋಮೇಶ್ವರನು ಪಟ್ಟಕ್ಕೆ ಬಂದನು.

ತ್ರೈಲೋಕ್ಯಮಲ್ಲ, ಆಂಶವಮಲ್ಲ ಎಂದು ಬಿರುದಾಂಕಿತನಾದ ಮೊದಲನೇ ಸೋಮೇಶ್ವರನ ಆಳ್ವಿಕೆಯ ಕಾಲದ ಹಲವಾರು ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ಲಭ್ಯವಾಗಿವೆ. ರಾಜನು ಕ್ರಿಶ.೧೦೪೨ರಲ್ಲಿ ಅಧಿಕರಕ್ಕೆ ಬಂದನು. ಈತನ ಆಳ್ವಿಕೆಯ ಕಾಲದಲ್ಲಿ ಶಾಸನಗಳಲ್ಲಿ ಈತನ ನಾಲ್ವರು ಹೆಂಡತಿಯ ಹೆಸರುಗಳು ಉಲ್ಲೇಖಗೊಂಡಿವೆ. ಇಮ್ಮಡಿ ಸೋಮೇಶ್ವರ, ೬ನೇ ವಿಕ್ರಮಾದಿತ್ಯ ಮತ್ತು ಮುಮ್ಮಡಿ ಜಯಸಿಂಹ ಇವರ ತಾಯಿಯಾದ ಬಾಚಲದೇವಿ ಮೊದಲ ಹೆಂಡತಿ ಅದೇ ಸ್ಥಳದಲ್ಲಿ ಕ್ರಿಶ. ೧೦೯೮ರ ಇನ್ನೊಂದು ಶಾಸನವು ಸೋಮೇಶ್ವರ ಮತ್ತು ವಿಕ್ರಮಾದಿತ್ಯರು ಬಾಚಲದೇವಿಯ ಮಕ್ಕಳೆಂದು ಉಲ್ಲೇಖಿಸಿವೆ. ಚಂದಲಾದೇವಿ ಇಲ್ಲವೆ ಚಂದ್ರಿಕಾದೇವಿ ಎಂಬುವಳು 'ಪಿರಿಯರಸಿ' ಯೆಂದು ಕರೆಯಲ್ಪಟ್ಟಿದ್ದಾಳೆ. ಮೈಳಾಲದೇವಿ ಎಂಬುವಳನ್ನು 'ಪಿರಿಯರಸಿ' ಯೆಂದು ತಿಳುವಳ್ಳಿಯಲ್ಲಿ ದೊರೆತ ಶಾಸನದಿಂದ ತಿಳಿಯುತ್ತದೆ. ಕೊನೆಯದಾಗಿ ೪ನೇಯವಳು ಕೇತಲಾದೇವಿ.

ತಳಕಲ್ಲು ಗ್ರಾಮದಲ್ಲಿನ ಕಲ್ಲೇಶ್ವರ ದೇವಸ್ಥಾನದಲ್ಲಿ ನಿಲ್ಲಿಸಿರುವ ಶಾಸನವು ಕ್ರಿ.ಶ. ೧೦೫೨ ರ ಕಾಲಾವಧಿಯದ್ದಾಗಿದೆ. ಈ ಶಾಸನದಲ್ಲಿ ಮೊದಲನೇ ಸೋಮೇಶ್ವರನ ಸಾವಂತನಾದ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೇರ್ಮಾಡಿದೇವನ್ನು ಕೋಗಳ-೫೦೦, ಉಲ್ಲಕುಂದೆ-೩೦೦ ಮತ್ತು ಕದಳಿಗೆ-೧೦೦೦ಗಳನ್ನು ಆಳುತ್ತಿದ್ದನೆಂದು ಮತ್ತು ಆತನ ಅಧೀನ ಅಧಿಕಾರಿ ಬಮ್ಮದೇವನು ತೊಣಂಕಲಿ ನಿಟ್ಟೂರು ಮತ್ತು ಬಸಿಕೊಡುಗಳನ್ನು ಆಳುತ್ತಿದ್ದನೆಂದು ಉಲ್ಲೇಖಿಸಲಾಗಿದೆ. ಹೀರೆಹಡಗಲಿಯ ಕಲ್ಲೇಶ್ವರ ದೇವಸ್ಥಾನದ ಆವರಣದಲ್ಲಿ ನಿಲ್ಲಿಸಿರುವ ಶಾಸನವು ಕ್ರಿ.ಶ. ೧೦೫೭ ರ ಕಾಲಾವಧಿಯದ್ದಾಗಿದೆ. ಈ ಶಾಸನದಲ್ಲಿ ಅಹವಮಲ್ಲನ ಮಗ ಯುವರಾಜ ವಿಕ್ರಮಾದಿತ್ಯ ಗಂಗ-ಪೇರ್ಮಾಡಿಯ ಗಂಗವಾಡಿ-೯೬೦೦೦, ಬನವಾಸಿ-೧೨೦೦೦ ಮತ್ತು ನೊಳಂಬವಾಡಿ-೩೨೦೦೦ ಪ್ರಾಂತ್ಯಗಳನ್ನು ಆಳುತ್ತಿದ್ದನೆಂಬುದಾಗಿ ತಿಳಿಸುತ್ತದೆ.[೧೮] ತ್ರೈಲೋಕ್ಯಮಲ್ಲದೇವನ ಆಡಳಿತದಲ್ಲಿ ವಿಷ್ಣುವರ್ಧನ ವಿಜಯಾದಿತ್ಯನು ವೆಂಗಿ ಮತ್ತು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದನೆಂದು ಹೂವಿನ ಹಡಗಲಿಯ ಪಾಂಡುರಂಗ ದೇವಸ್ಥಾನದ ಆವರಣದ ಬಳಿ ಕಲ್ಲಿನ ಮೇಲಿರುವ ಇನ್ನೊಂದು ಶಾಸನ ತಿಳಿಸುತ್ತದೆ.[೧೯]

ಮೊದಲನೆಯ ಸೋಮೇಶ್ವರನು ಅಧಿಕಾರಕ್ಕೆ ಬಂದ ಕೂಡಲೇ ಚಾಲುಕ್ಯರ ರಾಜಧಾನಿಯನ್ನು ಮಾನ್ಯಖೇಟದಿಂದ ಕಲ್ಯಾಣಕ್ಕೆ ವರ್ಗಾಯಿಸಿದನು. (ಇಂದಿನ ಬೀದರ್ ಜಿಂಜೆ) ಕಲ್ಯಾಣ ನಗರವನ್ನು ಈತನೇ ನಿರ್ಮಿಸಿದನು ಮತ್ತು ಅತ್ಯಂತ ಸೌಂದರ್ಯಭರಿತ ಪಟ್ಟಣವನ್ನು ಮಾಡಿದ್ದನು. ಅಂತಹ ಇನ್ನೊಂದು ನಗರವು ಹಿಂದೆ ಎಂದು ಇರಲಿಲ್ಲ ಮುಂದೆ ಎಂದು ಇರುವುದಿಲ್ಲ ಎಂದು ಬಿಲ್ಹಣನು ನಗರದ ಅಲಂಕಾರವನ್ನು ಕುರಿತು ಉದ್ಗರಿಸಿದ್ದಾನೆ.[೨೦] ಆದರೆ ಇಂತಹ ಸುಂದರ ನಗರವನ್ನು ನಿರ್ಮಿಸಿದ ಮೊದಲನೆಯ ಸೋಮೇಶ್ವರನು ಉತ್ಕಟವಾದ ದಾಹ, ಜ್ವರಭಾದೆಯಿಂದ ನರಳುತ್ತಿದ್ದನು. ತನ್ನ ಅಂತ್ಯ ಸಮೀಪಿಸುತ್ತಿದ್ದುದನ್ನು ಮನಗಂಡು ಬಳ್ಳಾರಿ ಜಿಲ್ಲೆಯ ತುಂಗಭದ್ರಾ ತೀರದ ಪವಿತ್ರ ಕ್ಷೇತ್ರವೆನಿಸಿದ್ದ ಕುರುವತ್ತಿಗೆ ಬಂದು ಶೈವಧರ್ಮದ ಶ್ರದ್ಧೆಗನುಸಾರವಾಗಿ ಆ ಪವಿತ್ರ ನದಿಯಲ್ಲಿ ಮುಳುಗಿ ಜಲಸಮಾಧಿ ಹೊಂದಿದನು ಎಂದು ಬಿಲ್ಹಣ ಕವಿ ಹೇಳಿದ್ದಾನೆ. ಈ ಹೇಳಿಕೆಯನ್ನು ಬಳ್ಳಿಗಾವೆಯ ಶಾಸನ ದೃಢಪಡಿಸುತ್ತದೆ. ಒಟ್ಟಾರೆಯಾಗಿ ಕ್ರಿ.ಶ.೧೦೪೨ ರವರೆಗೆ ಮೊದಲನೆಯ ಸೋಮೇಶ್ವರನು ಆಡಳಿತ ನಡೆಸಿದ್ದು ಈತನ ಆಡಳಿತದ ವ್ಯಾಪ್ತಿಗೆ ಬಳ್ಳಾರಿ ಜಿಲ್ಲೆಯ ಹಡಗಲಿಯೂ ಒಳಪಟ್ಟಿತ್ತು ಎಂಬುದು ಈ ಪ್ರದೇಶದಲ್ಲಿ ದೊರೆತ ಶಾಸನದಿಂದ ತಿಳಿಯುತ್ತದೆ.

ಮೊದಲನೆಯ ಸೋಮೇಶ್ವರನ ಮರಣದ ನಂತರ ಹಿರಿಯ ಮಗನಾದ ೨ನೇ ಸೋಮೇಶ್ವರನು ಕ್ರಿ.ಶ. ೧೦೬೮ ರ ಏಪ್ರಿಲ್ ೧೧ ರಂದು ಅಧಿಕಾರಕ್ಕೆ ಬಂದನು. ಈತನು ಸುಮಾರು ೭ ವರ್ಷಗಳ ಕಾಲ

ರಾಜ್ಯವಾಳಿ "ಭುವನೈಕ್ಯಮಲ್ಲ"ನೆಂದು ಬಿರುದಾಂಕಿತನಾಗಿದ್ದನು. ಈತನಿಗೆ ಸಂಬಂಧಿಸಿದಂತೆ ಕ್ರಿ.ಶ. ೧೦೬೯ ರ ಜುಲೈ–ಅಗಸ್ಟ್‌ನಿಂದ ೧೦೫೬ರ ಆಗಸ್ಟ್ ಸೆಪ್ಟೆಂಬರ್ ವರೆಗೆ ಶಾಸನಗಳು ದೊರೆಯುತ್ತವೆ.[೨೧] ಈತನೂ ಕೂಡ ಹಲವಾರು ಮಾಂಡಲಿಕ ರಾಜರು ಮತ್ತು ಅಧಿಕಾರಿ ವರ್ಗದವರನ್ನಿಟ್ಟುಕೊಂಡೇ ಆಡಳಿತವನ್ನು ನಡೆಸಿದನು. ಜೊತೆಗೆ ಇವನ ತಮ್ಮಂದಿರಾಗಿದ್ದ ಜಯಸಿಂಹ ಮತ್ತು ೬ನೇ ವಿಕ್ರಮಾದಿತ್ಯರು ಕೆಲಭಾಗಗಳನ್ನು ಆಳುತ್ತಿದ್ದರು. ಜಯಸಿಂಹನಿಗೆ ನೊಳಂಬವಾಡಿಯ ಆಡಳಿತಾಧಿಕಾರವನ್ನು ಒಪ್ಪಿಸಲಾಗಿದ್ದು ಈತನು ಕ್ರಿ.ಶ. ೧೦೭೨ರಲ್ಲಿ ಆ ಪ್ರಾಂತ್ಯವನ್ನು ಗೌಡವಾಡಿಯಿಂದ ಆಳುತ್ತಿದ್ದನು. ಮುಖ್ಯವಾಗಿ ಹಡಗಲಿಯನ್ನು ಜಯಸಿಂಹನೇ ಆಡಳಿತ ನಡೆಸಿದ್ದನು ಎಂಬುದು ಇದರಿಂದ ತಿಳಿದು ಬರುತ್ತದೆ. ಇಮ್ಮಡಿ ಸೋಮೇಶ್ವರನು ಅಧಿಕಾರದ ಲಾಲಸೆಯಿಂದ ಉನ್ಮತ್ತನಾಗಿ ಪ್ರಜಾಕಲ್ಯಾಣವನ್ನು ಕಡೆಗಳಿಸಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ.[೨೨] ಇದರಿಂದ ಬೇಸತ್ತ ೬ನೇ ವಿಕ್ರಮಾದಿತ್ಯನು ಈತನನ್ನು ಯುದ್ಧದಲ್ಲಿ ಸೋಲಿಸಿ ಅಧಿಕಾರವನ್ನು ವಹಿಸಿಕೊಂಡನು.

೬ನೇ ವಿಕ್ರಮದಿತ್ಯನು ಕಲ್ಯಾಣ ಚಾಲುಕ್ಯ ದೊರೆಗಳಲ್ಲಿಯೇ ಅತ್ಯಂತ ಶ್ರೇಷ್ಠ ಚಕ್ರವರ್ತಿಯಾಗಿದ್ದಾನೆ. ಕ್ರಿ.ಶ.೧೦೭೬ ರಲ್ಲಿ ಕಲ್ಯಾಣ ನಗರದಲ್ಲಿಪಟ್ಟಭಿಷಕ್ತನಾದ ನಂತರ ಅದೇ ವರ್ಷದ ಮಾರ್ಚ್ ೯ದಿನಾಂಕದಂದು ತನ್ನದೊಂದೆ ಶಕವನ್ನು ಪ್ರಾರಂಭಿಸಿದನು. ಕವಿ ಬಿಲ್ಹಣನು 'ವಿಕ್ರಮಾಂಕದೇವ ಚರಿತ' ದಲ್ಲಿ ಈತನನ್ನು "ಪರಮಾದಿತ್ಯ" ಎಂದು ಕರೆಯುತ್ತಾನೆ. ಈತನು ಕ್ರಿ.ಶ. ೧೦೭೮ ರಿಂದ ೧೧೨೭ ರವರೆಗೆ ಸುಮಾರು ೫೦ವರ್ಷಗಳ ಕಾಲ ರಾಜ್ಯಭಾರ ಮಾಡಿದನು. ೬ನೇ ವಿಕ್ರಮಾದಿತ್ಯನು ಮೊದಲನೇ ಸೋಮೇಶ್ವರನ ಪ್ರಿತಿಯ ಪುತ್ರನಾಗಿದ್ದನು. ತನ್ನ ತಂದೆಯ ಜೀವಿತಾವಧಿಯಲ್ಲೇ ಅನೇಕ ಯುದ್ಧಗಳನ್ನು ಮಾಡಿ ವೀರಪರಾಕ್ರಮಿವೆನಿಸಿದ್ದ. ಜೊತೆಗೆ ಕ್ರಿ.ಶ. ೧೦೫೫–೫೬ ರಲ್ಲಿ ವಿಕ್ರಮಾದಿತ್ಯನು ಗಂಗವಾಡಿ–೯೬೦೦೦ ಮತ್ತು ಬನವಾಸಿ–೧೨೦೦೦ ಗಳ ಆಡಳಿತವನ್ನು ಹಾನಗಲ್ಲು ಕದಂಬರ ವಂಶದ ಅರಿಕೆಸರಿಯೆಂಬ ಮಂಡಳೇಶ್ವರನೊಂದಿಗೆ ನಿರ್ವಹಿಸಿದ್ದನು. ಈತನು ಕರ್ನಾಟಕದ ಅರಸರಲ್ಲಿಯೇ ರಾಷ್ಟ್ರಮಟ್ಟದ ಗೌರವ ಗಳಿಸಿದ ಚಕ್ರವರ್ತಿಗಳಲ್ಲಿ ಅಗ್ರಸ್ಥಾನದಲ್ಲಿ ನಿಲ್ಲುತ್ತಾನೆ. ಅತ್ಯಧಿಕ ಶಾಸನಗಳನ್ನು ಬರೆಯಿಸಿ, ಯುದ್ಧ ಕಾರ್ಯ ಕೈಗೊಂಡು ಮತ್ತು ಬಹುಕಾಲ ಸಮರ್ಥ ಆಡಳಿತ ನಡೆಸಿದ್ದಾನೆ. ವಿಕ್ರಮಾದಿತ್ಯನ ಶಾಸನಗಳು ಅಗಣಿತವಾಗಿದ್ದು ಬಹುವಿಸ್ತಾರ ಪ್ರದೇಶದಲ್ಲೆಲ್ಲಾ ಹರಡಿವೆ. ಈತನಿಗೆ ಸಂಬಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ಬಹಳಷ್ಟು ಶಾಸನಗಳನ್ನು ಹೊಂದಿವೆ. ಅದರಲ್ಲಿ ಮುಖ್ಯವಾಗಿ ಹಡಗಲಿಯಲ್ಲಿ ಈತನ ಸಾಮಂತರು ಮಹಾಮಂಡಳೇಶ್ವರ, ಮಂಡಳೇಶ್ವರ ಮುಂತಾದವರು ಆಳ್ವಿಕೆ ನಡೆಸಿರುವ ಉಲ್ಲೇಖಗಳು ದೊರೆಯುತ್ತವೆ. ಅಂದರೆ ಹಡಗಲಿಯಲ್ಲಿ ಸಹ ೬ನೇ ವಿಕ್ರಮಾದಿತ್ಯನ ಆಡಳಿತಕ್ಕೆ ಒಳಪಟ್ಟಿದ್ದಿತು. ಎಂಬುದು ಇಲ್ಲಿ ದೊರೆಯುವ ಶಾಸನಗಳಿಂದ ತಿಳಿದು ಬರುತ್ತದೆ.

೬ನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಸುರೇಶ ಪಂಡಿತದೇವನು ಬೆಣ್ಣೂರು-೧೨ನ್ನು ಆಳುತ್ತಿದ್ದನೆಮದು ಕುರುವತ್ತಿಯ ಕಲ್ಲೇಶ್ವರ ದೇವಸ್ಥಾನದಲ್ಲಿರುವ ಶಾಸನದಿಂದ ತಿಳಿಯುತ್ತದೆ.[೨೩] ಅದೇ ಗ್ರಾಮದಲ್ಲಿನ ದೇವಸ್ಥಾನದಲ್ಲಿ ನಿಲ್ಲಿಸಿರುವ ಒಂದು ಶಾಸನದಲ್ಲಿ ಗಂಡರಾದಿತ್ಯನ ಹೊಳು ಗ್ರಾಮದ ಮಹಾಜನರು ಚಕ್ರವರ್ತಿಯ ಹತ್ತಿರ ಹೋಗಿ ಮನೆಯ ಬೊಪ್ಪಯ್ಯನು ಹೊಳಲು ಗ್ರಾಮವನ್ನು ವಶಪಡಿಸಿಕೊಂಡು ಗ್ರಾಮವನ್ನು ಕೊಳ್ಳೆಹೊಡೆದು, ಬ್ರಾಹ್ಮನರನ್ನು ಕೊಲ್ಲುತ್ತಿರುವ ವಿಷಯವನ್ನು ತಿಳಿಸಲು ಚಕ್ರವರ್ತಿ ಮನೆಯನ್ನು ಕರೆಯಿಸಿ ಆತನಾಗಲಿ ಆತನ ವಂಶದವರಾಗಲಿ ಹೊಳಲು ಗ್ರಾಮದ ಮನೆಯವರಾಗುವ ಹಕ್ಕಿಲ್ಲ ಎಂದು ಆತನಿಂದ ಬರೆಯಿಸಿ ಕೊಂಡದ್ದನ್ನು ತಿಳಿಸುತ್ತದೆ.

೬ನೇ ವಿಕ್ರಮಾದಿತ್ಯ ೫೦ ವರ್ಷಗಳ ಆಳ್ವಿಕೆಯಲ್ಲಿ ಕರ್ನಾಟಕದ ಕೀರ್ತಿ ಭಾರತದಲ್ಲೆಲ್ಲ ವ್ಯಾಪಿಸಿತು. ಕಲ್ಯಾಣ ಇವನ ರಾಜಧಾನಿಯಾಗಿದ್ದರೂ ರಾಜನು ಸತತವಾಗಿ ಸುತ್ತಾಡುತ್ತಿದ್ದುದ್ದರಿಂದ ತನ್ನ ಆಡಳಿತ ವ್ಯಾಪ್ತಿಗೆ ಒಳಪಟ್ಟ ಪ್ರದೇಶಗಳ ಜನರು ಸುಖ ಶಾಂತಿಯಿಂದಿದ್ದರು. ಕಲ್ಯಾಣ ಚಾಲುಕ್ಯರಲ್ಲಿಯೇ ಅತ್ಯಂತ ಪ್ರಸಿದ್ಧ ಚಕ್ರವರ್ತಿ ಎಂದೆನಿಸಿಕೊಂಡ ವಿಕ್ರಮಾದಿತ್ಯನ ಕ್ರಿ.ಶ. ೧೧೨೬ ರಲ್ಲಿ ಪಕ್ವವಾದ ವೃಧ್ಯಾಪದಲ್ಲಿ ನಿಧನ ಹೊಂದಿದನು. ಈತನ ನಂತರವೇ ವಿಕ್ರಮಾದಿತ್ಯನ ರಾಣಿ ಚಂದ್ರಲೇಖೆಯ ಮಗನಾದ ೩ನೇ ಸೋಮೇಶ್ವರನು ಕ್ರಿ.ಶ. ೧೧೨೭ರಲ್ಲಿ ಅಧಿಕಾರಕ್ಕೆ ಬಂದನು.

ಇಮ್ಮಡಿ ಜಗದೇಕಮಲ್ಲನು ೩ನೇ ಸೋಮೇಶ್ವರನ ಹಿರಿಯ ಮಗ ಪೆರ್ಮ ಅಥವಾ ಪೆಮ್ಮಾಡಿಯು ಇಮ್ಮಡಿ ಜಗದೇಕಮಲ್ಲನೆಂಬ ಬಿರುದಾಂಕಿತನಾಗಿ ಪಟ್ಟಕ್ಕೆ ಬಂದನು. ರಟನನ್ನು ಶಾಸನಗಳು "ಪ್ರತಾಪ ಚಕ್ರವರ್ತಿ ಎಂದು ಬಣ್ಣಿಸಿವೆ. ಈತನ ಆಳ್ವಿಕೆಯ ಎರಡನೇ ವರ್ಷದಲ್ಲಿ ರಚಿಸವಾದ ೧೧೩೯ರದ್ದೇ ಆತನ ಮೊದಲ ಶಾಸನವಾಗಿದೆ. ಈತನ ಆಳ್ವಿಕೆಯ ಕಾಲದ ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತವೆ. ಹಾಗೆಯೇ ಹಡಗಲಿ ತಾಲೂಕಿನ ಹೊಳಲು ಗ್ರಾಮದಲ್ಲಿನ ಶಾಸನವು ಇಮ್ಮಡಿ ಜಗದೇಕಮಲ್ಲನನ್ನು ಉಲ್ಲೇಖಿಸುವುದರ ಜೊತೆಗೆ ದಾನ ನೀಡಿರುವುದನ್ನು ಉಲ್ಲೇಖಿಸುತ್ತವೆ. ಹಡಗಲಿಯ ಕೊಟ್ಟಕಲ್ಲು ಗ್ರಾಮದಲ್ಲಿ ಕೊಟೇಶ್ವರ ದೇವಾಲಯದ ಗೋಡೆಗೆ ಸೇರಿರುವ ಕಲ್ಲಿನಲ್ಲಿರುವ ಶಾಸನವು ಬೇರೆ ಬೇರೆ ಕಾಲಗಳಲ್ಲಿ ಚಾಲುಕ್ಯ ಅರಸರು ದಾನ ನೀಡಿರುವುದನ್ನು ಉಲ್ಲೇಖಿಸುತ್ತವೆ. ಹಡಗಲಿಯ ರಂಗಾಪುರ ಎಂಬ ಗ್ರಾಮದಲ್ಲಿನ ನರಸಿಂಹದೇವರ ದೇವಸ್ಥಾನದ ಹತ್ತಿರದ ಶಾಸನವು ತುಂಬಾ ಹಾಳಾಗಿದ್ದು, ಇದು ಇಮ್ಮಡಿ ಜಗದೇಕಮಲ್ಲನ ಕಾಲಕ್ಕೆ ಸೇರಿದ್ದೆಂದು ಊಹಿಸಲಾಗಿದೆ.

ಉತ್ತಂಗಿಯ ಶಂಕರೇಶ್ವರ ದೇವಾಲಯದಲ್ಲಿ ದೊರೆತಿರುವ ಶಾಸನವು ಕ್ರಿ.ಶ. ೧೧೫೦ರ ಕಾಲಮಾನದ್ದಾಗಿದೆ. ಇದು ಬಳ್ಳಾರಿ ಜಿಲ್ಲೆಯಲ್ಲಿ ದೊರೆತಿರುವ ಇಮ್ಮಡಿ ಜಗದೇಕಮಲ್ಲನ ಅಂತ್ಯ ಕಾಲದ ಶಾಸನವಾಗಿದೆ. ಇಮ್ಮಡಿ ಜಗದೇಕಮಲ್ಲನ ಮರಣದ ನಂತರವು ಹರಪ್ಪನಹಳ್ಳಿಯ ಬಾಗಳಿ ಎಂಬ ಗ್ರಾಮದಲ್ಲಿನ ಶಾಸನವು ಕ್ರಿ.ಶ. ೧೧೬೦ ರ ಕಾಲಮಾನದ್ದಾಗಿದ್ದು. ಇದರಲ್ಲಿ ಈತನನ್ನು ಉಲ್ಲೇಖಿಸಿದೆ. ನಂತರ ಹತ್ತು ವರ್ಷಗಳ ಕಾಲ ಕಲ್ಯಾಣ ಚಾಲುಕ್ಯರ ಶಾಸನಗಳು ಜಿಲ್ಲೆಯಲ್ಲಿ ದೊರೆಯುವುದಿಲ್ಲ. ಕ್ರಿ.ಶ. ೧೧೮೩ರಲ್ಲಿ ಹಡಗಲಿಯ ಮ್ಯಾನರ ಮಸಲವಾಡದ ಕಲ್ಲೇಶ್ವರ ದೇವಾಲಯದ ಬಳಿ ಚಾಲುಕ್ಯ ದೊರೆ ಜಗದೇಕಮಲ್ಲನು ಕಲ್ಯಾಣದಿಂದ ಕಲಚೂರ್ಯ ದೊರೆ ರಾಯನಾರಾಯಣ ಅಹವಮಲ್ಲದೇವನ ಮಾಂಡಲಿಕನಾದ ವಿಜಯ ಪಾಂಡ್ಯನು ಕೋಗಳಿ-೫೦೦, ನೊಳಂಬವಾಡಿ-೩೨೦೦೦ ಆಳುತ್ತಿದ್ದನು ಎಂದು ಉಲ್ಲೇಖಿಸುತ್ತದೆ.[೨೪]

ಒಟ್ಟಾರೆಯಾಗಿ ಚಾಲುಕ್ಯ ಅರಸರು ಕ್ರಿ.ಶ. ೯೭೩ ರಿಂದ ವಿಜೃಂಭಿಸಿದ್ದು ಕೆಲವೇ ವರ್ಷಗಳಲ್ಲಿಯೇ ಪತನವನ್ನು ಕಂಡರು ಇವರ ನಂತರ ಕಲಚೂರ್ಯರು, ನೊಳಂಬರು, ಮಹಾಬಲಿ ಮಹಿಶರು, ಬ್ರಹ್ಮದಿಯರು, ಮೈದುಂಬರು, ಬಳ್ಳಾರಿ ಜಿಲ್ಲೆಯನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡಿದ್ದರು. ನಂತರ ಗುಪ್ತ ವಂಶದ ಇಮ್ಮಡಿ ವಿಕ್ರಮಾದಿತ್ಯನ ಎರಡು ಶಾಸನಗಳು ಹಡಗಲಿಯ ಕುರುವತ್ತಿಯ ಗ್ರಾಮದಲ್ಲಿನ ಮಲ್ಲಿಕಾರ್ಜುನ ದೇವಾಲಯದಲ್ಲಿ ದೊರೆಯುತ್ತದೆ. ಇವರ ನಂತರ ಕೊಟ್ಟೂರಿನ ಕದಂಬರು, ಸಿಂಧರು ಆಳ್ವಿಕೆ ನಡೆಸಿರುವುದಕ್ಕೆ ಜಿಲ್ಲೆಯಲ್ಲಿ ದೊರೆತ ಶಾಸನಗಳು ಸಂಕ್ಷಿಪ್ತವಾಗಿವೆ. ಹಾಗೆಯೇ ಪಾಂಡ್ಯರಿಗೆ ಸಂಬಂಧಿಸಿದ ಶಾಸನಗಳು ಹರಪ್ಪನಹಳ್ಳಿ, ಸಿರಗುಪ್ಪ, ಹಗರಿ ಮುಂತಾದ ಕಡೆಗಳಲ್ಲಿ ಮಾತ್ರವಲ್ಲದೆ ಹಡಗಲಿಯಲ್ಲಿಯೂ ದೊರೆಯುತ್ತದೆ. ಹಡಗಲಿ, ಉತ್ತಂಗಿ, ಸೋಗಿ, ಹೊಳಗುಂದಿ ಮುಂತಾದ ಪ್ರದೇಶಗಳಲ್ಲಿ ವಿಜಯ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನು ಎಂಬುದಾಗಿ ತಿಳಿಸುತ್ತವೆ. ಪಾಂಡ್ಯರ ನಂತರ ಹೊಯ್ಸಳರು ಅಧಿಕಾರಕ್ಕೆ ಬಂದರು.

**ಹೊಯ್ಸಳರು**

ಕಲ್ಯಾಣ ಚಾಲುಕ್ಯರ ರಾಜ್ಯಭಾರ ಕೊನೆಗೊಳ್ಳುವುದಕ್ಕಿಂತ ಪೂರ್ವದಲ್ಲಿಯೇ ಕರ್ನಾಟಕದ ದಕ್ಷಿಣ ಭಾಗದಲ್ಲಿ ಹೊಯ್ಸಳರು ರಾಜ್ಯಭಾರ ನಡೆಸಿದ್ದರು. ಆರಂಭದಲ್ಲಿ ಇವರು ಗಂಗರ ಮಾಂಡಲೀಕರಾಗಿದ್ದರು. ನಂತರ ಕಲ್ಯಾಣ ಚಾಲುಕ್ಯರ ಮಾಂಡಲಿಕರಾದರು. ಇವರು ಚಾಲುಕ್ಯ ಅರಸ ೬ನೇ ವಿಕ್ರಮಾದಿತ್ಯನ ಆಳ್ವಿಕೆಯ ಕಾಲಾವಧಿಯಲ್ಲಿ ಸ್ವತಂತ್ರರಾಗಲು ಹವಣಿಸಿದರೂ ಇದು ಕೈಗೂಡಲಿಲ್ಲ. ವಿಕ್ರಮಾದಿತ್ಯನ ನಂತರ ಬಲಶಾಲಿ ರಾಜನ ಮುಂದೆ ಇವರ ಪ್ರಯತ್ನ ವಿಫಲವಾಯಿತು. ಮುಂದೆ ಕಲಚೂರಿಗಳು ಕಲ್ಯಾಣ ಚಾಲುಕ್ಯರನ್ನು ಕೆಲಕಾಲ ಮೂಲೆಗುಂಪು ಮಾಡಿ ತಾವೇ ರಾಜ್ಯಭಾರ ಮಾಡತೊಡಗಿದಾಗ ದಕ್ಷಿಣದಲ್ಲಿ

ಹೊಯ್ಸಳರು ಸ್ವತಂತ್ರರಾಗಲು ಪ್ರಯತ್ನಿಸಿದರು. ಆದರೆ ಬಿಜ್ಜಳನ ದಂಡಯಾತ್ರೆಯ ಕಾರಣದಿಂದ ಈ ಪ್ರಯತ್ನವನ್ನು ನಿಲ್ಲಿಸಿದರು. ೧೨ನೇ ಶತಮಾನದ ಆರಂಭದ ವೇಳೆಗೆ ಚೋಳರು ಮತ್ತು ಹೊಯ್ಸಳರ ನಡುವೆ ಪರಮಾಧಿಕಾರಕ್ಕಾಗಿ ಯುದ್ಧಗಳು ಸಂಬಂಧಿಸಿದವು. ಈ ಸಂದರ್ಭದಲ್ಲಿ ಹೊಯ್ಸಳರು ಚೋಳರನ್ನು ತಲಕಾಡಿನಿಂದ ಕಾಲ್ತೆಗೆಯುವಂತೆ ಮಾಡಿದರು. ಆದರೆ ಇವರು ಒಂದು ಶತಮಾನಕ್ಕೂ ಹೆಚ್ಚು ಕಾಲ ಪಶ್ಚಿಮದ ಚಾಲುಕ್ಯರ ಸಾಮಂತರಾಗಿಯೇ ಉಳಿದಿದ್ದರು. ವಿನಯಾದಿತ್ಯನಿಂದ ಹಿಡಿದು ೨ನೇ ವೀರಬಲ್ಲಾಳನವರೆಗೆಗಿನ ಹೊಯ್ಸಳ ಶಾಸನಗಳಲ್ಲೆಲ್ಲ ಅವರು ಚಾಲುಕ್ಯರ ಅಧೀನರಾಗಿ ನಡೆದುಕೊಂಡು ಬಂದ ಅಂಶವೇ ವಿಧಿತವಾಗುತ್ತದೆ.

ಹೊಯ್ಸಳರ ರಾಜ್ಯದ ಉದಯದ ಬಗ್ಗೆ ಶಾಸನಗಳು ಕೆಲವು ಸಂಪ್ರದಾಯಿಕ ಉಲ್ಲೇಖಗಳು ಕಂಡುಬರುತ್ತವೆ. ಅವರು ಸೊಸೆವೂರನ್ನು (ಸಂಸ್ಕೃತ ಲೇಖಕರು ಹೇಳಿರುವಂತೆ ಶಕಕಪುರ) ತಮ್ಮ ಜನ್ಮಸ್ಥಳ ವೆಂದು ಹೇಳಿಕೊಂಡಿದ್ದಾರೆ. ಸ್ಥಳ ಚಿಕ್ಕಮಗಳೂರು ಜಿಲ್ಲೆಗೆ ಸೇರಿದ ಮೂಡಗೇರೆ ತಾಲೂಕಿನ ಅಂಗಡಿ ಎಂಬುದಾಗಿ ಗುರುತಿಸಲಾಗಿದೆ. ಇದು ಸ್ಥಳ ಮತ್ತು ಹುಲಿಗೆ ಸಂಬಂಧಿಸಿದ ಘಟನೆಯ ಸ್ಥಳವೆಂದೂ ಅದರಿಂದಲೇ ಸಳನು "ಪೋಯ್ ಸಳ" ಅಥವಾ ಹೊಯ್ಸಳ ರಾಜವಂಶದ ಸ್ಥಾಪಕನೆಂದು ಹೇಳಲಾಗಿದೆ.[೨೫] ಹೊಯ್ಸಳ ಮೂಲದ ಬಗ್ಗೆ ಬಹಳಷ್ಟು ಗೊಂದಲಗಳಿವೆ ಹಾಗಾಗಿ ಇವರ ಮೂಲದ ಕುರಿತು ಸಾಕಷ್ಟು ಕಥೆಗಳು ಶಾಸನಗಳಲ್ಲಿ ಕಂಡುಬರುತ್ತವೆ.

ವಿಷ್ಣುವರ್ಧನನ ಕ್ರಿ.ಶ.೧೧೧೭ರ ಬೇಲೂರು ಶಾಸನದಲ್ಲಿ ಹೇಳಿರುವಂತೆ ಈ ವಂಶದ ಮೂಲ ಪುರುಷ ಮತ್ತು ಸಾಮ್ರಾಜ್ಯ ಸ್ಥಾಪಕ ಸಳ. ಈತನನ್ನು "ಯದುವಂಶದ" 'ಆಭರಣ'ವೆಂದು ವರ್ಣಿಸಲಾಗಿದೆ. ಯದುವಂಶೋದ್ಧಾರ ತಿಲಕನಾದ ಸಳನು ಶಶಕಪುರದ ತನ್ನ ಮನೆದೇವರಾದ ವಾಸಂತಿಕಾ ದೇವಾಲಯದ ಪೂಜೆಗೆ ಹೋಗಿದ್ದಾಗ ದೇವಿಯನ್ನು ಗಂಧ, ಪುಷ್ಪ ಪರಿಮಳಗಳಿಂದರ್ಚಿಸಿದ ನಂತರ ತನ್ನ ಗುರು ವರ್ಧಮಾನ ಸುದತ್ತಾಚಾರ್ಯರ ಬಳಿ ಧರ್ಮೋಪದೇಶ ಕೇಳಲು ಹೋಗುತ್ತಿದ್ದನು. ಪ್ರವಚನ ಕೇಳುತ್ತಿದ್ದಾಗ ಒಂದು ಹುಲಿ ಕಾಡಿನಿಂದ ಅಲ್ಲಿಗೆ ಬಂದಿತು. ಅಕಾಯದ ಮೂನ್ಸೂಚನೆಯನ್ನು ಅರಿತ ಮುನಿ ಸಳನಿಗೆ ತನ್ನ ಕುಂತವನ್ನು ಕೊಟ್ಟ "ಪೊಯ್ ಸಳ" ಎಂದು ಹೇಳಿದನು. ಆಗ ಹುಲಿಯ ಸಂಹಾರವಾಯಿತು. ಅಂದಿನಿಂದ ಯದುವಂಶದ ರಾಜರಿಗೆ ಪೊಯ್ಸಳ ಎಂಬ ಹೆಸರು ಬಂದಿತು. ಈ ಸನ್ನಿವೇಶದಿಂದ ಪ್ರೇರಿತನಾದ ಸಳ ಹುಲಿಯನ್ನು ಸಂಹರಿಸುತ್ತಿರುವ ವೀರನ ಚಿತ್ರವನ್ನೇ ತನ್ನ ಲಾಂಛನವನ್ನಾಗಿ ಮಾಡಿಕೊಂಡನು ಎಂದು ಶಾಸನಗಳಲ್ಲಿ ತಿಳಿಸಲಾಗಿದೆ.

ಹಡಗಲಿಯ ತಾಲೂಕಿನ ಮಾಗಳ ಗ್ರಾಮದ ಸೂರ್ಯನಾರಾಯಣ ದೇವಾಲಯದ ಶಾಸನವು ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳನು ಗಂಗವಾಡಿ-೯೨೦೦೦, ನೊಳಂಬವಾಡಿ-೩೨೦೦೦, ಬನವಾಸಿ-೧೨೦೦೦, ಪುಲಿಗೆರೆ-೩೦೦ ಉಡರ ಬೆಳುವಳಗಳು ಮತ್ತು ಮಾಸವಾಡಿಯಿಂದ ಹೆದೊರ್ೕರೆವರೆಗೆ ಆಳುತ್ತಿದ್ದನು ಎಂದು ಉಲ್ಲೇಖಿಸಲಾಗಿದೆ. ಈ ಶಾಸನವು ಕ್ರಿ.ಶ. ೧೨೦೯ ರ ಕಾಲಮಾನದ್ದಾಗಿದೆ.[೨೬] ಕ್ರಿ.ಶ.೧೨೧೨ರ ಹೀರೆಹಡಗಲಿಯ ಶಾಸನದಲ್ಲಿ ವೀರಬಲ್ಲಾಳನು ನೊಳಂಬವಾಡಿ-೩೨೦೦೦, ಬನವಾಸಿ-೧೨೦೦೦, ಪುಲಿಗೆರೆ-೩೦೦ ಹಿದೊರೆವರೆಗಿನ ಎರಡು ಬೆಳವಲು ಮತ್ತು ಮಾಸವಾಡಿಗಳನ್ನು ತನ್ನ ನೆಲೆವೀಡು ಹಳ್ಳವೂರು ಅಥವಾ ವಿಜಯಸಮುದ್ರದಿಂದ ಆಳುತ್ತಿದ್ದನೆಂದು ಮತ್ತು ಈತನ ರಾಣಿ ಪಟ್ಟದರಸಿ ಪದುಮಮಲದೇವಿ ಹೊಸಹಡಂಗಿಲೆಯನ್ನು ಆಳುತ್ತಿದ್ದಳು ಎಂದು ಉಲ್ಲೇಖಿಸುತ್ತದೆ.[೨೭] ಕ್ರಿ.ಶ. ೧೨೧೪, ಕ್ರಿ.ಶ.೧೨೧೫ರಲ್ಲಿ ವೀರಬಲ್ಲಾಳನ ಉತ್ಸವಗಳು ಶಾಸನದಲ್ಲಿ ಬರುತ್ತವೆ.

ಕ್ರಿ.ಶ. ೧೨೨೫ರ ಹಡಗಲಿಯ ರಂಗಾಪುರ ಎಂಬ ಗ್ರಾಮದಲ್ಲಿನ ಶಾಸನವು ಪೊಲಾಳ್ವದಂಡನಾಥನು ಉತ್ಧನ ದ್ವಾದಶಿಯಂದು ನರಸಿಂಹದೇವರಿಗೆ ದಾನ ನೀಡಿದ ಉಲ್ಲೇಖವನ್ನು ಸೂಚಿಸುತ್ತದೆ. ನರಸಿಂಹನ ಆಡಳಿತದಲ್ಲಿ ಈ ಪ್ರದೇಶದಲ್ಲಿದ್ದ ಮಹಾಪ್ರಧಾನ ಸೋಮಣ ದಂಡನಾಯಕ ಗೋಪರಸ ಹಿಗ್ಗಡೆ ದೇವಯ್ಯ, ಹೆಗ್ಗಡೆ ಹರಿಯಣ್ಣ ಮಹಾಪ್ರಧಾನ ತಾವರಸಡಯ್ಯನ ಮಗ ಅಮಿತಯ್ಯ ದಂಡನಾಯಕ ಮೊದಲಾದವರ ಉಲ್ಲೇಖಗಳು ಬರುತ್ತವೆ.[೨೮] ಕ್ರಿ.ಶ. ೧೨೭೫ ರವರೆಗೆ ಹೊಯ್ಸಳರ ಶಾಸನಗಳು ಈ ಪ್ರದೇಶದಲ್ಲಿ ಕಂಡುಬರುವುದಿಲ್ಲ. ಕ್ರಿ.ಶ. ೧೨೭೬ ರ ಶಾಸನದಲ್ಲಿ ಕೋಗಳಿಯ ಬಸದಿಗೆ ದಾನ ನೀಡಿದ್ದು ಅದರಲ್ಲಿ ರಾಮನಾಥನನ್ನು ಉಲ್ಲೇಖಿಸಲಾಗಿದೆ. ಕ್ರಿ.ಶ. ೧೨೮೨, ಕ್ರಿ.ಶ. ೧೨೮೯ ರ ಶಾಸನಗಳಲ್ಲಿ ಈತನ ಉಲ್ಲೇಖ ಬಂದಿದೆ. ಕ್ರಿ.ಶ. ೧೨೯೧ ರ ಅವಧಿಯಲ್ಲಿನ ಶಾಸನದಲ್ಲಿ ವೀರಸಿಂಹನುಲ್ಲೇಖ ಬಂದಿದೆ. ಹೀಗೆ ಹೊಯ್ಸಳರಿಗೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ಹಲವಾರು ಶಾಸನಗಳು ದೊರೆತಿವೆ. ಅದರಲ್ಲಿಯೂ ಮುಖ್ಯವಾಗಿ ಹಡಗಲಿ ತಾಲೂಕಿನಲ್ಲಿ ಇವರ ಶಾಸನಗಳು ಹೆಚ್ಚಾಗಿ ಕಂಡುಬರುತ್ತವೆ. ಇವರ ನಂತರ ಬಳ್ಳಾರಿಯಲ್ಲಿ ದೇವಗಿರಿಯ ಯಾದವರ ಕಾಲಕ್ಕೆ ಸಂಬಂಧಿಸಿದ ಶಾಸನಗಳು ದೊರೆಯುತ್ತವೆ.

**ದೇವಗಿರಿಯ ಯಾದವರು**

ಯಾದವರು ಕಲ್ಯಾಣ ಚಾಲುಕ್ಯರ ತರುವಾಯ ಅಧಿಕಾರಕ್ಕೆ ಬಂದರು. ಇವರು ಕರ್ನಾಟಕದ ಬಲಭಾಗವನ್ನು ಆಳಿದರು. ದೇವಗಿರಿಯು ಮಹಾರಾಷ್ಟ್ರ ರಾಜ್ಯಕ್ಕೆ ಸೇರಿದೆ. ಇದಕ್ಕೆ ಇಂದಿನ ಹೆಸರು ದೌಲತಾಬಾದ್. ಹಾಗಾಗಿ ಇವರ ಇತಿಹಾಸವು ಕರ್ನಾಟಕದ ಇತಿಹಾಸದ ವ್ಯಾಪ್ತಿಗೆ ಹೊತೆಂದು ಸಹ ಪರಿಗಣಿಸಿರಬಹುದು. ಆದರೆ ಇವರು ದ್ವಾರಸಮುದ್ರದ ಹೊಯ್ಸಳರೊಂದಿಗೆ ತೀವ್ರ ಹೋರಾಟವನ್ನು

ನಡೆಸುತ್ತಿದ್ದರಿಂದ ಅವರ ರಾಜ್ಯದ ಎಲ್ಲೆಯು ಆಗಾಗ ಬದಲಾಗುತ್ತಿತ್ತು. ಹಾಗಾಗಿ ಯಾದವರು ಕರ್ನಾಟಕದೊಂದಿಗೆ ಬಹಳ ಉತ್ತಮ ಸಂಬಂಧವನ್ನು ಹೊಂದಿದ್ದರು. ಇವರು ದಕ್ಷಿಣ ಭಾರತದಲ್ಲಿ ೧೩-೧೪ನೇ ಶತಮಾನಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ನಹುಷನ ಮಗ ಯಯಾತಿಯ ಐವರು ಮಕ್ಕಳಲ್ಲಿ ಒಬ್ಬನಾದ ಯದುವಿನಿಂದ ತಮ್ಮ ವಂಶಾವಳಿಯನ್ನು ಹೇಳಿಕೊಳ್ಳುತ್ತಾರೆ. ಈ ವಂಶದ ರಾಜನಾದ ಮಹದೇವನ ಮಂತ್ರಿ ಹೇಮಾದ್ರಿ ರಚಿಸಿದ 'ವೃತಖಂಡ'ದ ಪ್ರಸ್ತಾವದಲ್ಲಿ ವಂಶಾವಳಿಯ ವಿಷಯವನ್ನು ತಿಳಿಸಲಾಗಿದೆ. ಸಿಂಘಣನು ಈ ವಂಶದ ಅತ್ಯಂತ ಪ್ರಬಲ ಅರಸನಾಗಿದ್ದಾನೆ. ಬಳ್ಳಾರಿ ಜಿಲ್ಲೆಯೂ ಇವರ ಆಡಳಿತಕ್ಕೆ ಒಳಪಟ್ಟದ್ದಿತ್ತು ಎಂಬುದಕ್ಕೆ ಇಲ್ಲಿ ದೊರೆತ ಸುಮಾರು ಕ್ರಿ.ಶ. ೧೨೦೦ ರಿಂದ ಈಚೆಗೆ ಕಾಣಸಿಗುತ್ತವೆ. ಕ್ರಿ.ಶ. ೧೨೦೫ರ ಹಡಗಲಿ ತಾಲೂಕಿನ ಕುರುವತ್ತಿಯಲ್ಲಿನ ಶಾಸನವು ಯಾದವ ಸಂಘಣನನ್ನು ಉಲ್ಲೇಖಿಸುತ್ತದೆ. ಸಿಂಘಣನ ಕಾಲದಲ್ಲಿ ಯಾದವ ರಾಜ್ಯವು ವಿಸ್ತಾರವಾಯಿತು. ಸಿಂಘಣನ ತರುವಾಯ ಇವನ ಮೊಮ್ಮಕಳಾದ ಕೃಷ್ಣ ಮತ್ತು ಮಹದೇವ ಇವರು ಸಾಮ್ರಾಜ್ಯವನ್ನು ವ್ಯವಸ್ಥೆಯಲ್ಲಿಟ್ಟುಕೊಂಡರು. ಮಹಾದೇವನು ಹೊಯ್ಸಳರಿಂದ ತುಂಗಭದ್ರೆಯ ಆಚೆಯ ಕೆಲವು ಪ್ರದೇಶಗಳನ್ನು ಮತ್ತು ಕೊಂಕಣದ ಉತ್ತರ ಭಾಗವನ್ನು ಪಡೆದುಕೊಂಡನು. ಹಾಗಾಗಿ ಮಹಾದೇವನಿಗೆ ಸಂಬಂಧಿಸಿದ ಒಂದೆರಡು ಶಾಸನಗಳು ಹಡಗಲಿ ತಾಲೂಕಿನಲ್ಲಿ ದೊರೆತಿವೆ. ಹಡಗಲಿ ತಾಲೂಕಿನ ಕೋಟೇಶ್ವರ ದೇವಸ್ಥಾನದ ಗೋಡೆಯಲ್ಲಿರುವ ಶಾಸನದಲ್ಲಿ ಯಾದವ ದೊರೆ ಮಹದೇವಯಾರನ ಉಲ್ಲೇಖವಿದೆ. ಹಾಗೆಯೇ ಹ್ಯಾರಡ ಗ್ರಾಮದ ಆಗ್ನೇಯ ದಿಕ್ಕಿಗಿರುವ ಒಂದು ಹೊಲದಲ್ಲಿ ಬಿದ್ದಿರುವ ನಂದಿ ಕಂಬದ ಮೇಲೆ ಯಾದವ ದೊರೆ ಮಹದೇವರಾಯನ ಆಳ್ವಿಕೆ ಮತ್ತು ಶ್ರೀ ಪರ್ವತದಲ್ಲಿನ ಮಲ್ಲಿಕಾರ್ಜುನ ದೇವರ ಸೇವಾಕಾರ್ಯಗಳಿಗಾಗಿ ಹರಡ ಗ್ರಾಮವನ್ನು ಮಹಾಪಸಾಯತ ದಳವಯ್ಯ.. ಸೋಯಿದೇವನು ದಾನ ಮಾಡಿದನು ಮತ್ತು ಬೆಣ್ಣೆವೂರ-೧೨ನ್ನು ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೨೯] ಮುಂದೆ ಕ್ರಿ.ಶ. ೧೨೨೮ ರಲ್ಲಿನ ಶಾಸನವು ಮೈಲಾರ ಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿ ದೊರೆತಿದೆ. ಈ ಶಾಸನವು ಯಾದವ ದೊರೆ ವೀರರಾಮಚಂದ್ರದೇವನ ಆಳ್ವಿಕೆಯಲ್ಲಿ ಜನ್ನುವ ನಾಯಕನು ಗಂಗುರಾಯದದಲ್ಲಿ ಕಲಿನಾಥದೇವರ ನಂದಿ ಕಲೇಶ್ವರನನ್ನು ತಿಳಿಸುತ್ತದೆ. ಕೆ.ವೀರಾಪುರದ ಹೊರಗಡೆ (ತುಂಬಿಕೆರೆಯಿಂದ ಹೊರಗಡೆ) ಶಿಬಾರಕಟ್ಟೆಯ ಕಂಬದ ಮೇಲಿನ ಶಾಸನವು ಯಾದವರ ಕಾಲಕ್ಕೆ ಸೇರಿದೆ.[೩೦] ಮುಖ್ಯವಾಗಿ ದೇವಗಿರಿ ಯಾದವರ ಶಾಸನಗಳು ಹಡಗಲಿ, ಕೂಡ್ಲಗಿ ಮತ್ತು ಹರಪನಹಳ್ಳಿಗಳಲ್ಲಿ ದೊರೆತಿವೆ. ಕ್ರಿ.ಶ. ೧೨೯೭ ರ ಕಾಲದ ಶಾಸನವು ಹಡಗಲಿ ತಾಲೂಕಿನ ಮಾನ್ಯರಮಸಗರವಾಡ ಗ್ರಾಮದಲ್ಲಿ ದೊರೆತಿದೆ. ಈ ಶಾಸನವು ಯಾದವ ದೊರೆಯಾದ ರಾಮಚಂದ್ರದೇವನ ಆಳ್ವಿಕೆಗೆ ಸೇರಿದ್ದು ಇದು ದಾನ ಶಾಸನವಾಗಿದೆ. ಈ ಶಾಸನವೇ ಬಳ್ಳಾರಿ ಜಿಲ್ಲೆಯಲ್ಲಿ

ಯಾದವರ ಕುರಿತು ಶಾಸನಗಳಲ್ಲಿ ಅಂತ್ಯದ ಶಾಸನವಾಗಿದೆ. ಇವರ ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಕಾರಣ ತುಂಗಭದ್ರ ನದಿ ಅಡ್ಡವಾಗಿರುವುದರಿಂದಲೋ ಹೊಯ್ಸಳರು ಅದರಲ್ಲಿ ಮುಖ್ಯವಾಗಿ ವೀರಬಲ್ಲಾಳನ ಕಾಲದಿಂದಿಚೆಗೆ ಈ ಪ್ರದೇಶದ ಮೇಲೆ ತಮ್ಮ ಹಿಡಿತವನ್ನು ಬಲಪಡಿಸಿದ್ದು ಆಗಿದೆ. ಒಟ್ಟಾರೆಯಾಗಿ ಯಾದವರು ಸಹ ಬಳ್ಳಾರಿ ಜಿಲ್ಲೆಯನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡಿದ್ದರು ಎಂಬುದು ಇಲ್ಲಿನ ಶಾಸನಗಳಿಂದ ತಿಳಿದು ಬರುತ್ತದೆ. ಇವರು ವಿಜಯನಗರ ಸಾಮ್ರಾಜ್ಯದ ಹುಟ್ಟಿಗೆ ಕಾರಣರಾದರು.

**ವಿಜಯನಗರ ಸಾಮ್ರಾಜ್ಯ**

ಬಳ್ಳಾರಿ ಜಿಲ್ಲೆಯು ವಿಜಯನಗರ ಸಾಮ್ರಾಜ್ಯದ ತವರು ಜಿಲ್ಲೆಯಾಗಿದೆ. ಇವರ ಆಳ್ವಿಕೆಗೆ ಸಂಬಂಧಿಸಿದಂತೆ ಅನೇಕ ಶಾಸನಗಳು ದೊರೆತಿವೆ. ಈ ಸಾಮ್ರಾಜ್ಯವನ್ನು ಮುಖ್ಯವಾಗಿ ನಾಲ್ಕು ವಂಶಸ್ಥರು ಆಳಿದ್ದಾರೆ. ಇವರಲ್ಲಿ ಸಂಗಮ ವಂಶದ ಶಾಸನಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಈ ವಂಶದ ನಂತರದಲ್ಲಿ ಸಾಳುವ ವಂಶ ಅಧಿಕಾರಕ್ಕೆ ಬರುತ್ತದೆ. ಈ ವಂಶದ ಶಾಸನಗಳು ಕೂಡ ಇಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ನಂತರದಲ್ಲಿ ತುಳುವ ವಂಶ ಅಧಿಕಾರಕ್ಕೆ ಬಂದಿತು. ಈ ವಂಶದ ಕೃಷ್ಣ ದೇವರಾಯ, ಅಚ್ಯುತರಾಯ ಮತ್ತು ಸದಾಶಿವರಾಯರ ಕಾಲಾವಧಿಯಲ್ಲಿನ ಶಾಸನಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಸಾಮ್ರಾಜ್ಯದ ಮೊಟ್ಟ ಮೊದಲ ಶಾಸನ ದೊರೆಯುವುದು ಹಡಗಲಿಯಲ್ಲಿ ಕ್ರಿ.ಶ. ೧೩೭೨ರ ಬುಕ್ಕರಾಯನ ಕಾಲದ ಶಾಸನವಾಗಿದೆ. ಹಡಗಲಿಯ ಬಸರಕೋಡು ಎಂಬ ಗ್ರಾಮದಲ್ಲಿನ ಕಲ್ಲೇಶ್ವರ ದೇವಾಲಯದ ಮುಂದೆ ಇರುವಂತಹ ವೀರಗಲ್ಲಿನ ಮುಂದಿನ ಶಾಸನವು ಬುಕ್ಕರಾಯನ ಆಸ್ಥಾನದಲ್ಲಿ ಪ್ರಧಾನಿಯಾಗಿದ್ದ (ಕೊಚರಿದೇವನು) ಸೈನ್ಯದ ನೇತೃತ್ವವನ್ನು ವಹಿಸಿದ್ದನೆಂದು ಯುದ್ಧದಲ್ಲಿ ಚಂದಪ್ಪನು ಮರಣ ಹೊಂದಿದನೆಂದು ತಿಳಿಸುತ್ತದೆ. ಇದು ಒಂದು ಹಡಗಲಿಯ ನಂತರದಲ್ಲಿ ನವೀಲತೀರ್ಥ, ರಾಮಸಾಗರ ಮುಂತಾದ ಪ್ರದೇಶಗಳಲ್ಲಿ ಬುಕ್ಕರಾಯನ ಕಾಲದ ಶಾಸನಗಳು ದೊರೆಯುತ್ತವೆ. ಈತನ ನಂತರ ಇಮ್ಮಡಿ ದೇವರಾಯನ ಕಾಲದ ಶಾಸನಗಳು ದೊರೆಯುತ್ತವೆ. ಈ ದೊರೆಯು ಸಂಗಮ ವಂಶದಲ್ಲಿಯೇ ಅತ್ಯಂತ ಶ್ರೇಷ್ಠ ಅರಸ ಎಂದು ಪ್ರಖ್ಯಾತನಾಗಿದ್ದಾನೆ. ಇವರ ಅಧಿಕಾರಾವಧಿಯಲ್ಲಿ ಒರಿಸ್ಸಾದ ಗಜಪತಿಗಳು, ಕೇರಳ, ಸಿಲೋನ್ ಮತ್ತು ಬಹುಮನಿ ಅರಸರ ವಿರುದ್ಧ ಹೋರಾಡುವುದರ ಮೂಲಕ ವಿಜಯನಗರ ಸಾಮ್ರಾಜ್ಯವನ್ನು ಒಂದು ಪ್ರಭಲ ಸಾಮ್ರಾಜ್ಯವನ್ನಾಗಿ ಪರಿವರ್ತಿಸಿದನು. ಇಮ್ಮಡಿ ದೇವರಾಯನು ಅನೇಕ ಬಿರುದುಗಳನ್ನು ಹೊಂದಿದ್ದನು. ಶಿವಮೊಗ್ಗ ಜಿಲ್ಲೆಯ ಒಂದು ಶಾಸನದಲ್ಲಿ ಮಹಾರಾಜಾಧಿರಾಜ, ರಾಜಪರಮೇಶ್ವರ, ವೀರಪ್ರತಾಪ ದೇವರಾಯ, ಮಹಾರಾಯ ಎಂದು ವರ್ಣಿಸುತ್ತದೆ. ಈತನ ವಿಶಿಷ್ಟವಾದ ಬಿರುದು ಗಜಬೇಂಟೆಕಾರ" ಇದು ಆನೆಯ ಬೇಟೆಯನ್ನು ಕುರಿತಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ

ಇವನಿಗೆ ಸಂಬಂಧಿಸಿದ ಶಾಸನಗಳು ಬಹಳಷ್ಟು ಕಂಡುಬರುವುದಿಲ್ಲವಾದರೂ ಹಡಗಲಿಯ ಮೈಲಾರ ಎಂಬ ಗ್ರಾಮದಲ್ಲಿನ ಮೈಲಾರ ದೇವಸ್ಥಾನದ ರಂಗಮಂಟಪದ ಕಂಬದ ಮೇಲೆ ಪ್ರೌಢ ದೇವರಾಯನ ಆಸ್ಥಾನದಲ್ಲಿ ಮಹಾಪ್ರಧಾನವಾದ ಸಂಗಣ್ಣ ದಂಡನಾಯಕನು ಮೈಲಾರ ದೇವರ ಭಕ್ತ ಮತ್ತು ಅಧಿಕಾರಿಯಾಗಿದ್ದ ಗಂಗರಸನು ದೇವಸ್ಥಾನದಲ್ಲಿ ರಂಗಮಂಟಪವನ್ನು ಕಟ್ಟಿಸಿದನು ಎಂಬ ಉಲ್ಲೇಖವಿದೆ. ಈ ರಾಜನ ನಂತರದಲ್ಲಿ ಸಮರ್ಥರಾದ ರಾಜರು ಸಂಗಮ ವಂಶದಲ್ಲಿ ಕಂಡುಬರಲಿಲ್ಲ. ಮುಂದೆ ತುಳುವ ವಂಶದ ಕೃಷ್ಣ ದೇವರಾಯನ ಕಾಲದವರೆಗೆ ಯಾವುದೇ ಶಾಸನಗಳು ದೊರೆಯುವುದಿಲ್ಲ. ಈ ವಂಶದ ಪೂರ್ವದಲ್ಲಿ ಸಾಳುವ ವಂಶ ಅಧಿಕಾರಕ್ಕೆ ಬಂದು ನಾಶ ಹೊಂದಿತ್ತು. ನಂತರದಲ್ಲಿ ತುಳುವ ವಂಶ ಅಧಿಕಾರಕ್ಕೆ ಬಂದಿತು. ಈ ವಂಶದಲ್ಲಿ ಪ್ರಮುಖ ಅರಸ ಕೃಷ್ಣದೇವರಾಯ, ಈತನಿಗೆ ಸಂಬಂಧಿಸಿದಂತೆ ಮೋಕದಲ್ಲಿ ದೊರೆತಿರುವ ಶಾಸನವೇ ಮೊದಲ ಶಾಸನಗಳಾಗಿವೆ. ಕೂಡ್ಲಿಗಿ, ಹೊಸಪೇಟೆ, ಬಳ್ಳಾರಿ ಮತ್ತು ಹಡಗಲಿಗಳಲ್ಲಿ ಕೃಷ್ಣದೇವರಾಯನ ಕುರಿತು ಶಾಸನಗಳು ದೊರೆತಿವೆ. ಹಡಗಲಿ ತಾಲೂಕಿನ ಸೋಗಿ ಎಂಬ ಗ್ರಾಮದಲ್ಲಿ ಈತನ ಕಾಲಕ್ಕೆ ಸಂಬಂಧಿಸಿದ ಶಾಸನ ದೊರೆತಿದೆ. ಈ ಶಾಸನವು ದಾನ ಶಾಸನವಾಗಿದೆ. ಈ ಶಾಸನವನ್ನು ಹೊರತುಪಡಿಸಿ ಹಡಗಲಿಯಲ್ಲಿ ಬೇರೆಲ್ಲೂ ಅಚ್ಯುತರಾಯನ ಶಾಸನವು ಹಡಗಲಿಯ ಮುಸುವನಕಲ್ಲಹಳ್ಳಿ ಎಂಬ ಗ್ರಾಮದಲ್ಲಿ ಕಲ್ಲೇಶ್ವರ ದೇವಾಲಯದ ಹತ್ತಿರ ದೊರೆತಿದೆ. ಈ ಶಾಸನವು ದಾನ ಶಾಸನವಾಗಿದೆ. ಅರಸನ ಪ್ರೀತಿಗೆ ಪಾತ್ರನಾದ ಅಣ್ಣಾಜಿಯು ಸಿಂಗಭಟ್ಟನಿಗೆ ಕಲ್ಲಹಳ್ಳಿ ಗ್ರಾಮವನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ಈತನ ನಂತರದಲ್ಲಿ ಹಡಗಲಿಯಲ್ಲಿ ಕಂಡುಬರುವುದು ಸದಾಶಿವರಾಯನ ಕಾಲದ ಶಾಸನಗಳು ಹಗರನೂರು, ನಕ್ಕರಹಾಳ, ಯದಿಹಳ್ಳ ಮತ್ತು ತಿಮ್ಮಾಪೂರ ಎಂಬ ಗ್ರಾಮಗಳಲ್ಲಿ ಈತನ ಶಾಸನಗಳು ದೊರೆತಿವೆ ಇವುಗಳೆಲ್ಲವೂ ದಾನ ಶಾಸನಗಳಾಗಿವೆ.

**ಹರಪನಹಳ್ಳಿ ಪಾಳೆಯಗಾರರು**

ವಿಜಯನಗರ ಅರಸರ ನಂತರದಲ್ಲಿ ಹರಪನಹಳ್ಳಿ ಪಾಳೆಯಗಾರರ ಆಡಳಿತಕ್ಕೆ ಹಡಗಲಿ ಒಳಪಟ್ಟಿತ್ತು. ದಾದಯ್ಯನಾಯಕನು ಹರಪ್ಪನಹಳ್ಳಿ ಪಾಳೆಯಪಟ್ಟನ್ನು ಸ್ಥಾಪಿಸಿದನು. ಇವನು ಮೊದಲಿಗೆ ಬಾಗಳಿಯಲ್ಲಿ ಅಧಿಕಾರ ಪ್ರಾರಂಭಿಸಿದ್ದರಿಂದ ಇವರಿಗೆ ಬಾಗಳಿ ನಾಯಕರೆಂದು ಕರೆಯಲಾಗಿದೆ. ಹರಪ್ಪನಹಳ್ಳಿ ಇವರ ಕಾಲದ ಶಾಸನಗಳು ದೊಡ್ಡಗೋವಿಂದನಹಳ್ಳಿ ಹ್ಯಾರಡ ಮತ್ತು ವಾವಿಹಳ್ಳಿಯಲ್ಲಿ ಕಂಡುಬರುತ್ತವೆ. ದೊಡ್ಡಗೋವಿಂದನಹಳ್ಳಿ ಕ್ರಿ.ಶ. ೧೭೬೫ರ ಶಾಸನ ಮುಮ್ಮಡಿಬಸವಪ್ಪನಾಯಕನ ಕಾಲದ್ದಾಗಿದೆ. ಇನ್ನೂ ಹ್ಯಾರಡದಲ್ಲಿ ಇವರ ಕಾಲದ ನಾಲ್ಕು ಶಾಸನಗಳು ಇದ್ದು, ಕಾಲದ ಉಲ್ಲೇಖವಿಲ್ಲದ ಎರಡು ಶಾಸನಗಳು ಬಾಗಳಿ ಬಸಪ್ಪ ನಾಯಕನ ಹೆಸರನ್ನು ಉಲ್ಲೇಖಿಸುತ್ತದೆ. ಹ್ಯಾರಡದ(ಶಾ.ಸಂ.೪೩)

ಬಾಗಳಿ ಬಸಪ್ಪ ನಾಯಕನ ಅಣತಿಯಂತೆ ಮದಪನಾಯಕನು ಹೆರಡದ ಸೇನಭೋವನ ಮಗನಿಗೆ ಭೂದಾನ ಮಾಡಿದ ವಿಷಯ ತಿಳಿಸುತ್ತದೆ. ಅದೇ ಗ್ರಾಮದ ಕ್ರಿ.ಶ. ೧೮೫೦ರ ಶಾಸನವು ಬಾಗಳಿ ಬಸಪ್ಪ ನಾಯಕನ ಮತ್ತು ಸೋಮಶೇಖರ ನಾಯಕರು ಶ್ರೀಗುರುಗಳಿಗೆ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಇನ್ನೂ ಕಾಲ ಉಕ್ತವಿಲ್ಲದ ಮುಮ್ಮಡಿ ಬಸಪ್ಪ ನಾಯಕನ ಶಾಸನವು ಬಸಪ್ಪ ನಾಯಕನು ತಳವಾರನೊಬ್ಬನನ್ನು ಬಾವಿ ತೆಗೆದಿದ್ದಕ್ಕೆ ತಳವಾರಿಕೆ ಮಾನ್ಯವಾಗಿ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಬಾವಿಹಳ್ಳಿಯ ಕರಿಯಬಸವೇಶ್ವರ ಮಠದ ಗರ್ಭಗೃಹದಲ್ಲಿ ಗೋಡೆಗೆ ಸೇರಿಸಿದ ಶಾಸನವು ಬಾಗಳಿ ಬಸಪ್ಪ ನಾಯಕನ ಹೆಸರನ್ನು ಉಲ್ಲೇಖಿಸಿದೆ.

ಹೀಗೆ ಹಡಗಲಿಯಲ್ಲಿ ದೊರೆತ ಶಾಸನಗಳನ್ನಾಧರಿಸಿ ಹಡಗಲಿಯ ಚಾರಿತ್ರಿಕ ಹಿನ್ನೆಲೆಯ ರಾಜಕೀಯ ಸನ್ನಿವೇಶಗಳನ್ನು ಗುರ್ತಿಸಲಾಗಿದೆ. ಮುಖ್ಯವಾಗಿ ಈ ಭಾಗವು ಕಲ್ಯಾಣ ಚಾಲುಕ್ಯರ ಆಡಳಿತದಲ್ಲಿ ಹೆಚ್ಚಾಗಿ ಒಳಪಟ್ಟಿರುವುದು ತಿಳಿಯುತ್ತದೆ. ನಂತರ ವಿಜಯನಗರ ಅರಸರ ಕಾಲಕ್ಕೆ ಒಳಪಟ್ಟಿತ್ತಾದರೂ ಹೆಚ್ಚಿ ಶಾಸನಗಳು ಲಭ್ಯವಾಗಿಲ್ಲ.

ಅಡಿ ಟಿಪ್ಪಣಿಗಳು

೧. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೫೭–ಕ್ರಿ.ಶ. ೩ನೇ ಶತಮಾನ

೨. ಗೋವಿಂದರಾಜು ಸಿ.ಆರ್, ಇತಿಹಾಸ, ಪು–೨೪೩

೩. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೪೭–ಕ್ರಿ.ಶ. ೧೦೨೫

೪. ಅದೇ ಹಡಗಲಿ–೬೦–ಕ್ರಿ.ಶ. ೧೦೩೯

೫. ಹಡಗಲಿ–೯೨–ಕ್ರಿ.ಶ. ೧೦೩೮

೬. ಕರ್ನಾಟಕ ಪರಂಪರೆ ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ–ಪು–೩೨೭

೭. ಸದಾಶಿವ.ಕೆ ಸಮಗ್ರ ಭಾರತದ ಇತಿಹಾಸ ಪು–೩೩೯

೮. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೫೨–ಕ್ರಿ.ಶ. ೧೦೪೬

೯. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೫೭–ಕ್ರಿ.ಶ. ೧೦೫೭

೧೦. ಅದೇ ಹಡಗಲಿ–೮೬–ಕ್ರಿ.ಶ. ೧೦೬೨

೧೧. ಬಳ್ಳಾರಿ ಜಿಲ್ಲೆಯ ಶಾಸನಗಳು, (ಸಂ), ಚನ್ನಬಸಪ್ಪ. ಎಸ್. ಪಾಟೀಲ್ ಮತ್ತು ವಿನೋದಾ ಪಾಟೀಲ್–ಶಾ.ಸಂ–೧೭೭–ಪು–೫೭

೧೨. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೮೩–ಕ್ರಿ.ಶ. ೧೦೯೦

೧೩. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೮೫–ಕ್ರಿ.ಶ. ೧೧೧೦

೧೪. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೯೩–ಕ್ರಿ.ಶ. ೧೦೯೭

೧೫. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೭೧–ಕ್ರಿ.ಶ. ೧೧೧೬

೧೬. ಕರ್ನಾಟಕ ಪರಂಪರೆ–ಪು–೩೩೪

೧೭. ಸದಾಶಿವ.ಕೆ ಸಮಗ್ರ ಭಾರತದ ಇತಿಹಾಸ ಪು–೩೩೪

೧೮. ಕನ್ನಡ ವಿ.ವಿ. ಶಾಸನ ಸಂಪುಟ–೧ ಬಳ್ಳಾರಿ–೬೧–ಕ್ರಿ.ಶ. ೧೧೪೧

೧೯. ಅದೇ ಹಡಗಲಿ–೫೬–ಕ್ರಿ.ಶ. ೧೧೪೨

೨೦. ಹಡಗಲಿ–೬೧–ಕ್ರಿ.ಶ. ೧೧೮೩

೨೧. ಕರ್ನಾಟಕ ಪರಂಪರೆ–ಸಂ–೧–ಪು–೪೬೭

೨೨. ಕನ್ನಡ ವಿ.ವಿ. ಶಾಸನ ಸಂಪುಟ–೧ ಹಡಗಲಿ–೫–ಕ್ರಿ.ಶ. ೧೨೦೫

೨೩. ಅದೇ ಹಡಗಲಿ–೬೭–ಕ್ರಿ.ಶ. ೧೨೦೯

೨೪. ಅದೇ ಹಡಗಲಿ–೫೩–ಕ್ರಿ.ಶ. ೧೨೧೨

೨೫. ಕನ್ನಡ ವಿ.ವಿ. ಶಾಸನ ಸಂಪುಟ-೧-ಪು-೩೨

೨೬. ಅದೇ ಹಡಗಲಿ-೪೨-ಕ್ರಿಶ. ೧೨೬೩

೨೭. ಕೊಟ್ರೇಶ್ ಎಂ, ಬಳ್ಳಾರಿ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ ಮತ್ತು ಇತಿಹಾಸ ವಿಚಾರ ಸಂಕೀರಣದಲ್ಲಿ ಮಂಡಿಸಿದ ಲೇಖನ

೨೮. ನಾಗವೇಣಿ. ಎ, ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ, -ಪು-೧೩

೨೯. ಅದೇ ಪು-೩೩

೩೦. ವಿಜಯನಗರ (ಹಂಪೆಯ) ಶಾಸನಗಳು-ಪು-೨೧೩ ಕ್ರಿಶ. ೧೪೧೦-ಪು೨೬೨

೩೧. ಕನ್ನಡ ವಿ.ವಿ. ಶಾಸನ ಸಂಪುಟ-೧ ಹಡಗಲಿ-೪೧-ಕ್ರಿಶ. ೧೨೫೨

೩೨. ಕನ್ನಡ ವಿ.ವಿ. ಶಾಸನ ಸಂಪುಟ-೧ ಹಡಗಲಿ-೧೦೧-ಕ್ರಿಶ. ೧೧೧೦

ಅಧ್ಯಾಯ-ಮೂರು

# ಕೆರೆಗಳ ಉಗಮ ಮತ್ತು ಪ್ರಾಚೀನತೆ

**ಉಗಮ :**

ಕ್ರಿ.ಶ. ಆರಂಭದ ಶತಮಾನಗಳಲ್ಲಿ ಕರ್ನಾಟಕವು ಅತೀ ಪ್ರಾಚೀನ ನೀರಾವರಿ ಯೋಜನೆಯನ್ನು ಅಳವಡಿಸಿಕೊಡಿತ್ತೆಂಬುದು ಶಿಲಾ ಶಾಸನಗಳಿಂದ ತಿಳಿಯುತ್ತದೆ. ಚಂದ್ರವಳ್ಳಿ, ತಾಳಗುಂದ ಮತ್ತು ಗುಡ್ನಾಪುರ ಕೆರೆಗಳು ಕದಂಬರ ಕಾಲದ ಕೆರೆಗಳಾಗಿವೆ. ಪ್ರಾಚೀನ ಕಾಲದಲ್ಲಿ ಬಾವಿಗಳನ್ನು ತೋಡಿಸುವುದು, ಕೆರೆಗಳನ್ನು ಕಟ್ಟಿಸುವುದು ಒಂದು ಪುಣ್ಯದ ಕಾರ್ಯವೆಂದು ಪರಿಗಣಿಸಲಾಗಿತ್ತು. ರಾಜರು, ರಾಣಿಯರು, ಮಂತ್ರಿ ಮಹೋದರರು, ದಂಡನಾಯಕರು, ಅಧಿಕಾರಿಗಳು, ಗಣ್ಯರು, ವರ್ತಕರು, ದೇವಸ್ಥಾನ ಕಟ್ಟಲು ತೋರಿಸಿದ ಭಕ್ತಿ ಭಾವದಿಂದಲೇ ಕೆರೆ ಮತ್ತು ಜಲಾನಯನಗಳನ್ನು ಕಟ್ಟುತ್ತಿದ್ದರು. ಹಂಪಿಯ ಲಕ್ಷ್ಮೀಧರನ ಶಿಲಾಶಾಸನ ಒಂದರಲ್ಲಿ, ತಾಯಿ ತನ್ನ ಮಗುವಿಗೆ ಹಾಲೆರಿಯುವಾಗ "ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಗಾರಂಗಳಿಂ ಮಾಡಿಸು", ಎಂದು ಹಾಡುತ್ತಿದ್ದಳೆಂದು ಹೇಳಿದೆ[1]. ಕ್ರಿ.ಶ. ೧೧೪೮ ರ ಶಾಸನದ ಪ್ರಕಾರ ಶಿರಸಂಗಿಯ ಸಾಮಾನ್ಯ ಸ್ತ್ರೀಯಾದ ಸೋರಿಗಾವುಂಡಿಯು ತನಗೆ ಪುಣ್ಯವನ್ನು ತರುವಂತಹ ಯಾವುದಾದರೂ ಕೆಲಸವನ್ನು ಮಾಡಬೇಕೆಂದು ತನ್ನ ಮೂರು ಮಕ್ಕಳನ್ನು ಕೋರಿಕೊಂಡಳೆಂದು ಅದರಂತೆ ಒಂದು ಕೆರೆಯನ್ನು ದುರಸ್ತಿ ಮಾಡಿದರೆಂದು ಹೇಳಲಾಗಿದೆ.

ಮಾನವನ ಉಗಮ ಮತ್ತು ವಿಕಾಸದ ಸುದೀರ್ಘ ಇತಿಹಾಸವನ್ನು ಗಮನಿಸಿದಾಗ ಮಾನವ ಪೂರ್ವ ಕಾಲದಿಂದಲೂ ಭೌತಿಕ ಹಾಗೂ ಮಾನಸಿಕವಾಗಿ ವಿಕಾಸ ಹೊಂದುವುದರೊಂದಿಗೆ ಪರಿಸರದಲ್ಲಿ ಆಗುತ್ತಿರುವ ಕಠಿಣ ಸಮಸ್ಯೆಗಳನ್ನು ಸಹ ಎದುರಿಸುತ್ತಾ ಬಂದಿದ್ದಾರೆ. ಮಾನವ ಎಲ್ಲಾ ಬಗೆಯ ಚಟುವಟಿಕೆಗಳ ಕಾರ್ಯಕ್ಷೇತ್ರವು ಸರೋವರ, ಕೆರೆ, ನದಿ, ತೊರೆಗಳ ಸಮೀಪದಲ್ಲಿಯೇ ಕೇಂದ್ರಿಕೃತವಾಗಿತ್ತು. ಸರಿಸುಮಾರು ಇಂದಿನಿಂದ ಏಳು ಸಾವಿರ ವರ್ಷಗಳ ಪೂರ್ವದಲ್ಲಿ ಮಾನವನು ತನ್ನ ಅಲೇಮಾರಿ ಜೀವನ ಬಿಟ್ಟು ಒಂದೆಡೆ ಸ್ಥಿರವಾಗಿ ನೆಲೆ ನಿಲ್ಲುವ ಪ್ರಯತ್ನವು ಅವನ ಜೀವನದಲ್ಲಿ ಬಂದದ್ದು ವ್ಯವಸಾಯದಿಂದಲೇ. ಈ ವ್ಯವಸಾಯ ಪದ್ಧತಿಯು ಅವರ ಜೀವನದಲ್ಲಿ ಒಂದು ಕ್ರಮಬದ್ಧತೆಯನ್ನು ತಂದಿತು. ಮಾನವ ಸರ್ವೋತೋಮುಖ ಅಭಿವೃದ್ಧಿ ವ್ಯವಸಾಯದ ಆವಿಷ್ಕಾರದಿಂದಲೇ ಪ್ರಾರಂಭವಾಯಿತು. ಒಂದು ಸಂಸ್ಕೃತಿಯ ಉಗಮ ಮತ್ತು ವಿಕಾಸಕ್ಕೆ ವ್ಯವಸಾಯ ತಳಹದಿಯಾಯಿತು[2].

ಮಾನವನು ಮೊದಲಿಗೆ ವ್ಯವಸಾಯವನ್ನು ಪ್ರಾರಂಭಿಸಿದಾಗ ಮಳೆಯನ್ನು ನಂಬಿ, ವಿಪುಲವಾಗಿ ನೀರು ಸಿಗುವ ಭಾಗವಾಗಿದ್ದ ನದಿಯನ್ನು ಆಶ್ರಯಿಸಿದ್ದನು. ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆ ಮತ್ತು

ಸಕಾಲದ ವೈಪಲ್ಯತೆಯು ಅವನನ್ನು ಆಗಾಗ ಕಷ್ಟಕ್ಕೆ ಒಳಪಡಿಸುತ್ತಿದ್ದರಿಂದ ಅವನು ನೀರನ್ನು ಸಂಗ್ರಹಮಾಡಿ ಉಪಯೋಗ ಮಾಡಹತ್ತಿದ. ಮುಂದೆ ವ್ಯವಸಾಯಕ್ಕೆ ಉಪಯೋಗಿಸಲು ನೀರಿಗೆ ಒಡ್ಡು ಹಾಕಿ ಸಂಗ್ರಹ ಮಾಡಲು ಪ್ರಾರಂಭಿಸಿದ ನಂತರ ಇವುಗಳೇ ಕೆರೆಕುಂಟೆಗಳಾಗಿ ಉಗಮಗೊಂಡವು.[5]

**ಪ್ರಾಚೀನತೆ :**

ನೀರು ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ನೀರಿಲ್ಲದೆ ಮನುಷ್ಯ ಅಷ್ಟೆ ಏಕೆ, ಇಡೀ ಜೀವ ಸಂಕುಲ ಬದುಕಲಾರದು. ಹಾಗಾಗಿ ನೀರು ಭೂಮಿಯ ಮೇಲೆ ಅತ್ಯಮೂಲ್ಯ ಸಂಪನ್ಮೂಲ. ನೀರು ಕೇವಲ ಮನುಷ್ಯ, ಪ್ರಾಣಿ ಹಾಗೂ ಪಕ್ಷಿ ಸಂಕುಲಕ್ಕೆ ಮಾತ್ರವಲ್ಲ ಸಸ್ಯ ಸಂಕುಲಕ್ಕೂ ಜೀವ ಸಂಜೀವಿನಿ. ಹಾಗಾಗಿ ಮನುಷ್ಯ ಭೂಮಿ ಮೇಲೆ ಕಾಣಿಸಿಕೊಂಡಾಗಿನಿಂದ ಸದಾ ನೀರಿನ ನೀರಿನ ಮೂಲ ನೆಲೆಗಳಲ್ಲಿ ವಾಸಿಸಲಾರಂಭಿಸಿದ. ಕ್ರಮೇಣ ನಾಗರಿಕತೆ ವಿಕಸಿಸಿದಂತೆ ಆದಿ ಮಾನವ ಬೇಟೆ ಸಂಸ್ಕೃತಿಗೆ ಕಾಲಿರಿಸಿದಾಗ ಅವನಿಗೆ ನೀರಿನ ಅವಶ್ಯಕತೆ ಮತ್ತು ಮಹತ್ವ ಮತ್ತಷ್ಟು ಹೆಚ್ಚಾಯಿತು. ಮಳೆಗಾಲದಲ್ಲಿ ತನ್ನ ಸುತ್ತಮುತ್ತಲು ಪ್ರಕೃತಿ ಹಚ್ಚ ಹಸುರಿನಿಂದ ನಳನಳಸುವುದನ್ನು ಕಂಡುಕೊಂಡ.[6] ತಾನು ಬಿತ್ತಿದ ಬೆಳೆ ಬೆಳೆಯಲು ಈಗ ಅವನು ಬೆಟ್ಟದಿಂದ ಇಳಿದು ಬಯಲು ಪ್ರದೇಶಕ್ಕೆ ಬರುವುದು ಅನಿವಾರ್ಯವಾಯಿತು. ಅಲ್ಲಿ ಸುರಿಯುತ್ತಿದ್ದ ಮಳೆ ನೀರನ್ನು ಹಿಡಿದಿಟ್ಟುಕೊಳ್ಳಲು ಯೋಚಿಸಿದ. ಹರಿದ ಹಳ್ಳಗಳಿಗೆ ಒಡ್ಡುಗಳನ್ನು ಹಾಕಿ, ಇಲ್ಲವೇ ಗುಂಡಿಗಳನ್ನು ತೋಡಿ ನೀರನ್ನು ನಿಲ್ಲಿಸಿದ. ಹೀಗೆ ಸಂಗ್ರಹಿಸಿದ ನೀರು ಅವನ ದಿನ ಬಳಕೆಯ ಜೊತೆಗೆ ಕೃಷಿಗೂ ಉಪಯೋಗವಾಗಿ ನೀರಾವರಿ ಪದ್ದತಿ ಮೊದಲಾಯಿತು. ರಾಜಸತ್ತೆ ಪ್ರಾರಂಭಗೊಂಡ ಮೇಲೆ ಜನರಿಗೆ, ಪ್ರಾಣಿಗಳಿಗೆ ಮತ್ತು ಕೃಷಿಗೆ ನೀರಿನ ವ್ಯವಸ್ಥೆಯನ್ನು ಒದಗಿಸುವುದು ಅರಸರ ಒಂದು ಸಾಮಾಜಿಕ ಜವಾಬ್ದಾರಿಯಾಯಿತು. ಕೆರೆ, ಬಾವಿ, ಕೊಳ, ಕಟ್ಟೆ, ಕಾಲುವೆ ಮುಂತಾದ ರೂಪಗಳಲ್ಲಿ ಜಲ ಸಂಗ್ರಹಣೆ ವಿಧಾನಗಳು ರೂಢಿಗೊಂಡವು. ಹೀಗೆ ಹೂವಿನ ಹಡಗಲಿ ತಾಲೂಕಿನಲ್ಲಿ ಪ್ರಾರಂಭಿಕ ಅರಸರ ಕಾಲಗಳಲ್ಲಿ ಇಂತ ಪ್ರಯಯ್ನಗಳು ನಡೆದಿರುವುದಕ್ಕೆ ಕೆಲವು ಸಾಕ್ಷಿಗಳಿವೆ. ಊರನ್ನು ಕಟ್ಟುವ ಮೊದಲು ಕೆರೆಗಳನ್ನು ಕಟ್ಟು ಊರು ತನ್ನಿಂದ ತಾನೇ ಬೆಳೆಯುತ್ತದೆ ಎಂಬುದು ವಾಸ್ತವ. ಕೆರೆಗಳನ್ನು ಅಲ್ಲಿ ಊರು ಬೆಳೆಯುತ್ತದೆ. ಊರು ಬೆಳೆಯಲು ಕೆರೆಗಳು ಬೇಕೆಬೇಕೆ. ಹಾಗೆ ನೋಡಿದರೆ ನಮ್ಮ ನಾಗರೀಕತೆ ಬೆಳೆಯುದಿರುವುದೇ ನದಿ ಪಾತ್ರಗಳಲ್ಲಿ ಹಾಗೂ ಕೆರೆ–ಕಟ್ಟೆಗಳಲ್ಲಿ. ಕೆರೆ ಕೇವಲ ನೀರಿನ ಸೆಲೆ ಅಥವಾ ಸಂಗ್ರಹತಾಣ ಮಾತ್ರ ಅಲ್ಲ. ಕೆರೆಗಳಿಂದ ನಿರ್ಧರಿಸುವ ಕಾಲವು ಇತ್ತು. ಯಾವ ಊರಿನಲ್ಲಿ ಹೆಚ್ಚು ಕೆರೆಗಳಿವೆಯೋ ಆ ಊರು ಸಮೃದ್ದವಾಗಿದೆ ಎಂಬುವುದು ನಂಬಿಕೆ. ಕೆರೆಗಳು ನಮ್ಮ ಜೀವನದ ಅವಿಭಾಜ್ಯ ಅಂಗ. ನಮ್ಮ ಜನಪದರಲ್ಲಂತೂ ಕೆರೆಗಳ ಪಾತ್ರಗಳೂ ಕೆರೆಗಳ ಸುತ್ತಲೇ ಸುತ್ತುತ್ತಿರುತ್ತವೆ[7]. ಯಾವುದೇ ಊರಿರಬಹುದು. ಆ ಊರಿನಲ್ಲಿ ಒಂದು ಕೆರೆಯಿರಬೇಕು. ನೀರನ್ನು ಸೇದಲು. ಬಟ್ಟೆ ತೊಳೆಯಲು. ಸ್ನಾನಮಾಡಲು.

ಜಾನುವಾರುಗಳಿಗೆ ಮೈ ತೊಳೆಯಲು ಎಲ್ಲರು ಕೆರೆಗೆ ಬರಬೇಕು ಅಲ್ಲಿಗೆ ಬರುವವರನ್ನು ನೋಡಲು, ಕಳ್ಳದೃಷ್ಟಿ ಬೀರಲು, ನಿಂತು ಮಾತನಾಡಲು ಕೆರೆಯೇ ಒಂದು ಕುಂಟ ನೆಪ. ಊರಿಗೆ ಬಂದವಳು ನೀರಿಗೆ ಬಾರದಿರುತ್ತಾಳಾ[೬] ಎಂದು ಹೇಳಿರುವುದು ಕೆರೆಯನ್ನು ಉದ್ದೇಶಿಸಿಯೇ.

ಕೆರೆ ಕಟ್ಟೆಗಳು ಭಾರತೀಯ ಪರಂಪರೆಯಲ್ಲಿ ಮಾನವನ ಅವಿಭಾಜ್ಯ ಅಂಗಗಳಾಗಿ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿವೆ. ಆದಿ ಮಾನವನು ತನ್ನ ನೀರಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮಳೆಯ ನೀರನ್ನು ಸಂಗ್ರಹಿಸುವ, ನದಿಯ ಪ್ರವಾಹವನ್ನು ಬೇರೆಡೆಗೆ ತಿರುಗಿಸುವ ಪ್ರಯತ್ನಗಳನ್ನು ಮಾಡಿ, ಅದರಿಂದ ಬೇಸಾಯವನ್ನು ಮಾಡುವುದಲ್ಲದೇ, ತನ್ನ ವಸತಿಯ ಬೆಳವಣಿಗೆಗೆ ಕಾರಣನಾಗಿದ್ದಾನೆ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ನೂತನ ಶಿಲಾಯುಗದ ಕಾಲದಲ್ಲಿ ಹಾಗೂ ನಂತರದ ಬೃಹತ್ ಶಿಲಾಯುಗದ ಕಾಲದಲ್ಲಿ ಕೃತಕ ಅಥವಾ ಮಾನವ ನಿರ್ಮಿತ ಕೆರೆಗಳು ಪ್ರಾರಂಭವಾದವೆಂದು ಹೇಳಬಹುದು. ಇದನ್ನು ಬೇರೆ ರೀತಿಯಾಗಿ ಹೇಳುವುದಾದರೆ ಕೆರೆ ಕಟ್ಟೆಗಳ ನಿರ್ಮಾಣ ಕಾರ್ಯ ಕರ್ನಾಟಕದಲ್ಲಿ ಪ್ರಾರಂಭವಾದದ್ದು, ನೂತನ ಶಿಲಾಯುಗದ ಕಾಲದಲ್ಲಿ ಅದು ಹೆಚ್ಚು ಬೆಳಕಿಗೆ ಬಂದಿರುವುದು ಬೃಹತ್ ಶಿಲಾಯುಗದ ಕಾಲದಲ್ಲಿ ಶಾತವಾಹನ ರಾಜನಾದ ಪುಳಮಾಯಿಯ ಮ್ಯಾಕೆಡೋಣಿ ಶಾಸನವು ಕೆರೆ ಬಗ್ಗೆ ಪ್ರಸ್ತಾಪಿಸುವ ಅತೀ ಪ್ರಾಚೀನವಾದ ಶಾಸನ. ಇದಾದ ನಂತರ ಕದಂಬ ಅರಸ ಮಯೂರವರ್ಮನ ಚಂದ್ರವಳ್ಳಿ ಶಾಸನ[೭] ಚಂದ್ರವಳ್ಳಿಯಲ್ಲಿ ಕೆರೆಯ ಜೀರ್ಣೋದ್ದಾರ ಮಾಡಿದುದ್ದನ್ನು ಉಲ್ಲೇಖಿಸಿದೆ. ಕರ್ನಾಟಕ ಪ್ರದೇಶವನ್ನು ಆಳಿದ ಶಾತವಾಹನರು ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ವಿಜಯ ನಗರದ ಅರಸರು, ಆದಿಲ್‌ಶಾಹಿಗಳು ಮತ್ತು ಬ್ರಿಟಿಷರು ಕೆರೆಗಳನ್ನು ಹತ್ತ ಹಲವು ಕಾರಣಗಳಿಗೆ ನಿರ್ಮಿಸಿದರೂ ವ್ಯವಸಾಯ ಮತ್ತು ವಸತಿ ಪ್ರದೇಶಕ್ಕೆ ನೀರನ್ನು ಒದಗಿಸುವ ಮುಖ್ಯ ಉದ್ದೇಶವನ್ನು ಹೊಂದಿದ್ದರು. ಕೆರೆಗಳ ನಿರ್ಮಾಣ ಪುಣ್ಯಪ್ರದವೆಂದೇ ಭಾವಿಸಿದ್ದ ಅಂದಿನ ಜನ ಅದನ್ನು ನಿರ್ಮಿಸುವ ಮತ್ತು ಸುಸ್ಥಿತಿಯಲ್ಲಿ ಕಾಪಾಡುವ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸುತ್ತಿದ್ದರು. ಹಾಗಾಗಿ ಅಂದಿನ ಕೆರೆಗಳು ಇಂದಿನವರೆಗೂ ಉಳಿದುಕೊಂಡು ಬಂದಿವೆ. ಮುಖ್ಯವಾಗಿ ಅಗ್ರಹಾರ, ದೇವಾಲಯ, ಛತ್ರ, ಮಠ, ಮತ್ತು ಕೆರೆಗಳು ಹಾಗೂ ನೂತನವಾಗಿ ಸ್ಥಾಪಿತವಾದ ವಸತಿ ಪ್ರದೇಶಗಳು ಒಂದಕ್ಕೊಂದು ಅವಲಂಬಿಸಿದ್ದವು ಈ ಹಿನ್ನಲೆಯಲ್ಲಿ ನೋಡಿದಾಗ ಹೂವಿನ ಹಡಗಲಿ ತಾಲೂಕಿನ ಕೆರೆಗಳು ಹಲವು ಕಾರಣಗಳಿಂದಾಗಿ ನಿರ್ಮಾಣ ಮಾಡಿದ್ದರೂ ವ್ಯವಸಾಯಕ್ಕೆ ನೀರೂ ಒದಗಿಸುವ ಅಲ್ಲಿನ ಜನವಸತಿ ದೈನಂದಿನ ಅವಶ್ಯಕತೆಗಳನ್ನು ಪೂರೈಸುವ ಉದ್ದೇಶಗಳಿಗೆ ನಿರ್ಮಿತವಾಗಿದೆ[೮].

ಕೆರೆಗಳು ಹೇಗೆ ? ಯಾವಾಗ ? ಏಕೆ ಕಟ್ಟಲ್ಪಟ್ಟವು ಎಂಬ ಪ್ರಶ್ನೆಗೆ ಇತಿಹಾಸದಲ್ಲಿ ಸ್ಪಷ್ಟ ಉತ್ತರವಿಲ್ಲ. ಆದರೆ ಪ್ರಾಚೀನ ಕಾಲದಲ್ಲಿ ನವ ಶಿಲಾಯುಗದ ಮಾನವನು ಸ್ವಾಭಾವಿಕವಾಗಿ ಮಳೆ ತಗ್ಗು ಪ್ರದೇಶಗಳಲ್ಲಿ ಸಂಗ್ರಹಗೊಳ್ಳುವುದನ್ನು ಅವಲೋಕಿಸಿದ ನಂತರ ಕೃತಕ ನೀರಿನ ಸೆಲೆಯನ್ನು ಸೃಷ್ಟಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಹೀಗೆ ನಿಂತ ನೀರಿನ ಉಪಯೋಗಮಾಡಿಕೊಳ್ಳಲು ಪ್ರಾಚೀನ ಕಾಲದ ಮಾನವನಿಗೆ ಕೆರೆಗಳನ್ನು ಕಟ್ಟಲು ಪ್ರೇರಣೆ ಆಗಿರಬೇಕು. ಮನುಷ್ಯರು ನೆಲೆ ನಿಂತು ಪಶುಪಾಲನೆ ಮತ್ತು ಕೃಷಿಯಲ್ಲಿ ಪಾಲ್ಗೊಂಡ ಮೇಲೆ ಕೆರೆಗಳು ಸೃಷ್ಟಿಯಾಗಬಹುದು. ರಾಜಪ್ರಭುತ್ವ ಬೆಳೆದು ಬಂದ ಮೇಲೆ ಇಂಥ ಕೆರೆಗಳನ್ನು ಕಟ್ಟಿಸುವುದು ರಾಜಧರ್ಮವಾಗಿ ಪರಿಣಮಿಸಿತು. "ಕೆರೆಯಂ ಕಟ್ಟಿಸು ಕಾಲುವೆಯಂ ಸವೆಸು" ಎಂಬಿತ್ಯಾದಿ ಮಾತುಗಳು ಹುಟ್ಟಿ ಜನಪ್ರಿಯವಾದವು. ದಕ್ಷಿಣ ಭಾರತದ ಚರಿತ್ರೆಯಲ್ಲಿ ಚೋಳರು ಕೆರೆ ಕಟ್ಟಿಸುವ ಕಾಯಕವನ್ನು ತಾವು ರಾಜ್ಯ ಸ್ಥಾಪಿಸಿದ ಕಡೆಗಳೆಲ್ಲಾ ವಿಸ್ತರಿಸಿದರು. ಇದೇ ಕೆರೆಯ ಪರಂಪರೆಯನ್ನು ಮಕ್ಕೆಲ್ಲಾ ರಾಜರು ಮುಂದುವರೆಸಿದರು. ಚೋಳರು ತಮ್ಮ ರಾಜ್ಯಾಡಳಿತದಲ್ಲಿ ಕೆರೆಕಟ್ಟೆ ವಾರಿಯಂ, (ಕೆರೆಕಟ್ಟೆ ಸಮಿತಿ) ಎಂಬ ಆಡಳಿತ ವಿಭಾಗವನ್ನೇ ಆರಂಭಿಸಿದ್ದರು. ಸ್ಥಳೀಯ ಆಡಳಿತದ ಅತೀ ಮುಖ್ಯ ಕೆಲಸ ಇದೇ ಆಗಿತ್ತು. ಚೋಳರ ಆಡಳಿತಕ್ಕೊಳಪಟ್ಟ ಕರ್ನಾಟಕದ ಕೋಲಾರ ಮತ್ತು ತುಮಕೂರು ಜಿಲ್ಲೆಗಳಲ್ಲಿ ನೂರಾರು ಕೆರೆಗಳ ಒಂದು ದೊಡ್ಡ ಜಾಲವೇ ಜೀವ ತಳೆದದ್ದು ಈ ಕಾರಣದಿಂದಲೇ. ಕೆರೆ ಕಟ್ಟಿಸುವ ಕಾರ್ಯ ಕೇವಲ ರಾಜ್ಯ ಕಾರ್ಯವಾಗಿರಲಿಲ್ಲ. ಅದು ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯವಾಗಿತ್ತು. ಆದ್ದರಿಂದಲೇ ರಾಜರಿಗೆ ಕೆರೆ ಕಟ್ಟಿಸುವ ಕೆಲಸ ಕಷ್ಟವಾಗಿರಲಿಲ್ಲ. ಉಳ್ಳವರು ಹಣಸಹಾಯ, ದವಸಧಾನ್ಯದ ಸಹಾಯ ಮಾಡಿದರೆ ದುಡಿಯುವ ಜನರು ಕೆರೆ ನಿರ್ಮಾಣ ಕಾರ್ಯದ ರೂವಾರಿಗಳಾದರು. ಹತ್ತಾರು ವರ್ಷ ಹಿಡಿಯುತ್ತಿದ್ದ ಕೆರೆ ನಿರ್ಮಾಣದ ಕೆಲಸ ದೇವಾಲಯ ನಿರ್ಮಾಣದ ಕೆಲಸಕ್ಕಿಂತ ಶ್ರದ್ಧೆಯಿಂದ ನಡೆಯುತ್ತಿತ್ತು[5].

ಇಂತಹ ಕೆರೆಗಳ ನಿರ್ಮಾದಲ್ಲಿ ರಾಜ ಮಹಾರಾಜರು, ಮಂತ್ರಿಗಳು, ಸಾಮಂತ ಅಧಿಕಾರಿಗಳು ಅತಿಯಾದ ಶ್ರದ್ದೆ ತೋರಿದ್ದು ಯಾಕೆ? ಈಗಾಗಲೇ ಇದ್ದ ಭಾವಿಗಳು, ಸಣ್ಣ ಸಣ್ಣ ಕಟ್ಟೆಗಳು, ಸ್ವಾಭಾವಿಕ ಕೆರೆಗಳು ಸಾಲದಾದವೇ? ಪಶುಪಾಲನೆಗೆ ಇವರ ವಿಶೇಷ ಕೊಡುಗೆಯೇ ? ಕೆರೆ ನಿರ್ಮಾಣಕ್ಕೆ ಅತೀ ಉತ್ಸಾಹಕ್ಕೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಕಾರಣಗಳಷ್ಟೇ ಕಾರಣವೇ? ಎಂಬಿತ್ಯಾದಿ ಪ್ರಶ್ನೆಗಳ ಜೊತೆಗೆ ಇನ್ನೊಂದು ಅಂಶವನ್ನು ಗಮನಿಸಬಹುದು. ರಾಜರ ಮೊದಲ ಆದ್ಯತೆ ಜನಕಲ್ಯಾಣ ಆಗಿರಲಿಲ್ಲ, ಅದು ಒಂದು ಅಂಶವಾಗಿತ್ತೆಂಬುದು ನಿಜವಾದರೂ ಅವರ ಆದ್ಯತೆ ತಮ್ಮ ರಾಜ್ಯಗಳ ಅಧಿಕಾರಿಗಳ ರಕ್ಷಣೆ ಅದಕ್ಕೆ ಬೇಕಾದ ಸೈನ್ಯ ಕಟ್ಟುವುದು, ಸೈನ್ಯ ಹೆಚ್ಚುತ್ತಾ ಹೋಗುವುದು, ಕುದುರೆ ಸೈನ್ಯ, ಒಂಟೆ ಸೈನ್ಯ, ಸೈನ್ಯಕ್ಕೆ ಬೇಕಾದ ಶಸ್ತ್ರಾಸ್ತ್ರ, ಆಹಾರ, ಬಟ್ಟೆ ಇತ್ಯಾದಿಗಳನ್ನು ಹೊತ್ತುಕೊಂಡು ಹೋಗಲು ಎತ್ತು, ಕತ್ತೆ, ಹೇಸರಗತ್ತೆಗಳು,

ಸೈನ್ಯದೊಂದಿಗೆ ಸಾಗಬೇಕಾಗಿತ್ತು. ಇವೆಲ್ಲವುಗಳೊಂದಿಗೆ ಅಪಾರ ಪ್ರಮಾಣದಲ್ಲಿ ಬೇಕಾಗಿದ್ದ ನೀರನ್ನು ಹೊತ್ತು ಒಯ್ಯುವುದು ಸಾಧ್ಯವೇ ಇರಲಿಲ್ಲ ಆದ್ದರಿಂದ ರಾಜರು ಅವರ ಬುದ್ಧಿವಂತ ಮಂತ್ರಿಗಳು ಕಂಡುಹಿಡಿದ ನೇರಮಾರ್ಗ ಈ ಕೆರೆಗಳು, ರಾಜರು ದಂಡಯಾತ್ರೆಗಳಿಗೆ ನೀರೊದಗಿಸುವುದು ಕೆರೆಗಳ ಮೊದಲ ಆದ್ಯತೆಯಾಗಿತ್ತು.

ಅವನ ಅಧಿಕಾರಿಗಳು ಕೆರೆಗಳ ಉಸ್ತವಾರಿಯನ್ನು ನೋಡಿಕೊಳ್ಳುತ್ತಿದ್ದರು. ರಾಜತ್ವದ ಈ ಹಂತದ ಕೆರೆಗಳಿಗೆ ತೂಬುಗಳೇ ಇರಲಿಲ್ಲವೆಂಬುದು ಅವರ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಬರಗಾಲ, ಜಲಕ್ಷಾಮ, ಅಲ್ಪ ಸ್ವಲ್ಪ ಜನರಲ್ಲಿನ ಜಾಗೃತಿ, ಬಂಡಾಯ, ಅತೃಪ್ತಿ ಇತ್ಯಾದಿ ಕಾರಣಗಳ ಫಲವಾಗಿ ಜನರ ಯೋಗಕ್ಷೇಮದ ಕಡೆಗೆ ರಾಜರು ಗಮನಹರಿಸಿದರು. ಆಗ ಕೆರೆಗಳ ಮೇಲೆ ಜನರಿಗೆ ಅಲ್ಪ ಅಧಿಕಾರ ಪ್ರಾಪ್ತವಾಯಿತು. ಹೆಚ್ಚುವರಿ ನೀರನ್ನು ಕೃಷಿಗೆ ಬಳಸಲು ತೂಬುಗಳನ್ನು ಅಳವಡಿಸಿದರು. ಇಷ್ಟಾದರೂ ಕೆರೆಗಳ ಹಿಂಭಾಗದ ಭೂಮಿ ಬಹುಕಾಲ ರಾಜರು ಮತ್ತವರ ಜೊತೆಗಿದ್ದ ಬ್ರಾಹ್ಮಣ ಪುರೋಹಿತರ ಹಿಡಿತದಲ್ಲಿತ್ತು.[೧೦] ಈ ಜಮೀನಿನಲ್ಲಿ ಬೆಳೆದ ಬೆಳೆಯನ್ನು ಮಂತ್ರಿಗಳು ಮತ್ತು ಪುರೋಹಿತರಿಗೆ ಮೀಸಲಾಗಿತ್ತು. ದುಡಿತ ಮಾತ್ರ ಬಡವರ ಕಡ್ಡಾಯ ಕರ್ತವ್ಯವಾಗಿತ್ತು. ಹೀಗೆ ಕೆರೆಗಳು, ನದಿಗಳು ಅಕ್ಕ ಪಕ್ಕಗಳ ಭೂ ಪ್ರದೇಶವೆಲ್ಲಾ ಶ್ರೀಮಂತ ಒಡೆತನದಲ್ಲಿತ್ತು. ಏರಿಗೆ ಮಣ್ಣು ಹಾಕುವುದು, ದಡ ಕುಸಿಯದಂತೆ ಏರಿಗೆ ಕಲ್ಲು ಕಟ್ಟುವುದು ಒಡ್ಡರ ಆದ್ಯ ಕರ್ತವ್ಯವಾಗಿತ್ತು. ದಲಿತರು ನೀರನ್ನು ಮುಟ್ಟುವಂತಿರಲಿಲ್ಲ.

ಇಂತಹ ತಮ್ಮದೇ ಅಸಂಖ್ಯಾತ ದಾಳಿಗಳನ್ನು ಇತರ ವೈರಿ ರಾಜ್ಯಗಳ ಕೊನೆ ಇರದ ದಾಳಿಗಳನ್ನು ಸಹಿಸಿ ಸಾಕಾಗಿ ಜನ ರೊಚ್ಚಿಗೆದ್ದು, ದಂಗೆ ಏಳ ತೊಡಗಿದ ಮೇಲೆ ಕೆರೆಗಳಿಗೆ ತೂಬುಗಳು ರಚನೆಯಾಗಿರಬೇಕು. ರಾಜರ ಕಾಲ ಮುಗಿದ ನಂತರ ಹೊಸಕಾಲ ಆರಂಭವಾಯಿತು. ಕಾಲಕಳೆದಂತೆ ನಗರೀಕರಣದಿಂದ ಕೆರೆಗಳ ಊರಿನ ಒತ್ತುವರಿಗೆ ಆರಂಭವಾಯಿತು.

ಚೋಳರ ಕಾಲದಲ್ಲಿ ಕಟ್ಟಲ್ಪಟ್ಟ ಕೆರೆಗಳು ಹೆದ್ದಾರಿಗಳಿಗೆ ಹೊಂದಿಕೊಂಡೆ ಇದ್ದವು. ಈ ಹೆದ್ದಾರಿಗಳು ಕೆರೆಗಳು ಮೊದಲಿಗೆ ತೂಬುಗಳನ್ನು ಹೊಂದಿದ್ದಂತೆ ಕಾಣುವುದಿಲ್ಲ. ಈ ಬಗೆಯ ಕೆರೆಗಳು ಮಾತ್ರ ಬೃಹತ್ ಸೈನ್ಯದ ನೀರಿನ ಅಗತ್ಯವನ್ನು ಪೂರೈಸಲು ಶಕ್ತವಾಗಿದ್ದವು. ಸೈನ್ಯದ ಬಹುಮುಖ್ಯ ಭಾಗವಾಗಿದ್ದ ಪ್ರಾಣಿಗಳಿಗೂ ಈ ನೀರು ಬಳಕೆಯಾಗುತ್ತಿತ್ತು. ಎರಡು ಮೂರು ವರ್ಷ ಮಳೆ ಕೈಕೊಟ್ಟರೂ ಈ ಬಗೆಯ ಕೆರೆಗಳಿಂದ ನೀರಿಗೇನು ದುಸ್ತರವಾಗುತ್ತಿರಲಿಲ್ಲ. ನಾಡು ಬರ ಅನುಭವಿಸುತ್ತಿದ್ದರೂ ಲೂಟಿಗಾಗಿ ರಾಜ್ಯ ಒತ್ತುವರಿಗಾಗಿ, ಕ್ರೀಡೆಗಾಗಿ ಯುದ್ಧಗಳು ಮುಂದುವರೆಯುತ್ತಿದ್ದವು. ದೇಹಲಿ ಸುಲ್ತಾನ ಮತ್ತು ಮೊಗಲ್ ರಾಜರ ಪ್ರವೇಶದಿಂದ ಭಾರತ ಪ್ರದೇಶಗಳ "ಪ್ರಭುತ್ವಕ್ಕಾಗಿ ಸ್ಪರ್ಧೆ" ತೀವ್ರಗೊಂಡು ರೈತ ಬಂಡಾಯಗಳು

ಚಿಗುರೊಡೆಯ ತೋಡಗಿದ ಮೇಲೆ "ಉದಾರ ಪ್ರಭುತ್ವ" "ಜನರ ಕಲ್ಪನೆ" ಅಲ್ಪಮಟ್ಟಿಗಾದರೂ ಸ್ಥಾಪಿತವಾಗತೊಡಗಿತು.[10] ಇದರ ಒಂದು ಪರಿಣಾಮದಿಂದ ಕೆರೆ ನೀರಿನ ಮೇಲೆ ರೈತರಿಗೆ ತುಸುಮಟ್ಟಿನ ಹಕ್ಕು ಪ್ರಾಪ್ತವಾಯಿತು. ಇದಕ್ಕೆ ಕೆರೆಯ ಹಿಂಭಾಗದ ಭೂಮಿ ಎಂದೂ ರೈತಾಪಿ ಜನರ ಒಡೆತನದಲ್ಲಿರದೆ ರಾಜ ಪರಿವಾರ, ದೇವಾಲಯ, ಪುರೋಹಿತ ಮತ್ತು ಪುರೋಹಿತರ ದತ್ತಿ ಭೂಮಿಯಾಗಿರುತ್ತಿತ್ತು. ಇದೇ ಪರಿಸ್ಥಿತಿ ಅಲ್ಪ ಸ್ವಲ್ಪ ಬದಲಾಣೆಯೊಂದಿಗೆ ಇಂದಿಗೂ ಮುಂದುವರೆದು, ನದಿ ನೀರು ಮತ್ತು ಅಂತರ್ಜಲದ ಒಡೆತನ ಮೇಲ್ಜಾತಿಗಳಿಗಷ್ಟೇ ವಿಸ್ತಾರಗೊಂಡಿರುವುದು, ಪ್ರಭುತ್ವಗಳು ಯಾರ ಪರ ಎಂಬುದನ್ನು ಸಾಬೀತು ಪಡಿಸುವಂತಿದೆ[11].

ನೀರು, ಜಲ, ಉದಕ, ಗಂಗೆ ಹೀಗೆ ಹತ್ತು ಹಲವು ಹೆಸರುಗಳಿಂದ ಕರೆಸಿಕೊಳ್ಳುವ ನೀರಿಗೆ ಭರತ ಖಂಡದಲ್ಲಿ ಪುರಾಣ ಕಾಳದಿಂದಲೂ ಒತ್ತು ಕೊಡಲಾಗಿದೆ. ಭಗೀರತ ಗಂಗೋದಕವನ್ನು ದೇವಲೋಕದಿಂದ ತಂದನೆಂಬುದು ಪ್ರತೀತಿ. ಋಷ್ಯಶೃಂಗನೆಂಬ ಮುನಿ ಸಂಚಾರಕ್ಕೆ ತೆರಳಿದಡೆಯಲ್ಲೆ ಮಳೆ ಬರುತ್ತಿತ್ತು. ಅಗಸ್ತ್ಯ ಮಹಾಮುನಿ ಸಮುದ್ರವನ್ನೇ ಆಪೋಶನ ತೆಗೆದುಕೊಡಿದ್ದಾನಂತೆ, ದುರ್ಯೋಧನ ಜಲಸ್ತಂನ ವಿದ್ಯೆಯಲ್ಲಿ ಪಾರಂಗತನಾಗಿದ್ದ, ಪಾಂಡವರು ಬಾಯಾರಿ ನೀರಿಗೆ ಹಾರಿ ನಾಲ್ವರು ಅಸುನೀಗಿದ್ದರು, ಧರ್ಮರಾಯ ಯಕ್ಷಪ್ರಶ್ನೆಗೆ ಉತ್ತರಿಸಿ ಅವರೆಲ್ಲರನ್ನು ಬದುಕಿಸಿಕೊಂಡ. ಶಿವ ತನ್ನ ಮಡದಿಯಾದ ಪಾರ್ವತಿಯನ್ನು ತನ್ನ ತೊಡೆಯ ಮೇಲೆ ಕುಳ್ಳರಿಸಿಕೊಂಡರೆ, ನೀರಿನ ಮಾತೆ ಗಂಗಾದೇವಿಯನ್ನು ತನ್ನ ಮುಡಿಯಲ್ಲೆ ಇರಿಸಿಕೊಂಡಿದ್ದಾನೆ. ಭೀಷ್ಮಾಚಾರ್ಯರು ಉತ್ತರಾಯಣ ಪುಣ್ಯಕಾಲಕ್ಕೆ ಕಾಮ ಪ್ರಾಣತ್ಯಾಗಕ್ಕೆ ಸಿದ್ಧರಾಗಿದ್ದರು, ಆಗ ಅರ್ಜುನ ನಿಂತಲ್ಲೇ ಬಾಣ ಬಿಟ್ಟು ಗಂಗೆಯನ್ನು ಅದರ ಬಾಯಿಗೆ ಬೀಳುವಂತೆ ಮಾಡಿದ್ದ, ರಾಮ ನೀರಿಗಾಗಿ ಬಾಣಬಿಟ್ಟು ನೀರು ಉಕ್ಕುವಂತೆ ಮಾಡಿದ ಕಥೆ ನಮ್ಮ ರಾಜ್ಯದಲ್ಲಿ ಹತ್ತು ಹಲವಾರು ಕಡೆಗಳಲ್ಲಿ ಕೇಳುತ್ತೇವೆ. ಹೀಗೆ ಪ್ರಾಚೀನ ಕಾಲದಲ್ಲಿ ನೀರಿನ ಉಗಮದ ಬಗ್ಗೆ ಪುರಾಣ, ಐತಿಹ್ಯಗಳ ಮೂಲಕ ತಿಳಿದುಕೊಳ್ಳಬಹುದು.

ಕನ್ನಡದ ಕವಿ ಬೇಂದ್ರೆ 'ಇಳಿದು ಬಾ ತಾಯಿ ಇಳಿದು ಬಾ' ಎಂದು ಮುಗಿಲಿನಿಂದ ಗಂಗೆಯನ್ನು ಕರೆಯುತ್ತಾರೆ. ನೀರು ನೀರಿನೊಳಗು ನೀರಿನಿಂದ ನೀರು ಜನಿಸುತ್ತದೆ. ಇದೊಂದು ಸೃಷ್ಟಿ (ಚಕ್ರದ) ನಿಯಮ. ನೆಲದ ಮೇಲಿರುವ ನೀರು ಸೂರ್ಯನ ತಾಪಕ್ಕೆ ಆವಿಯಾಗಿ ಮುಗಿಲಿಗೆ ಹೋಗಿ ಮೋಡಗಟ್ಟಿ ಪುನಃ ಭೂಮಿಗೆ ಮಳೆಯ ರೂಪದಲ್ಲಿ ಸುರಿಯುವ ಒಂದು ಕ್ರಮದಿಂದಾಗಿ ನೀರು ಜೀವ ಜಲದ ಚೈತನ್ಯವಾಗಿ ಭೂಮಿಯ ಮೇಲಿನ ಸಕಲ ಜೀವ ರಾಶಿಗಳಿಗೆ ಬದುಕನ್ನು ನೀಡಿದೆ. ಜೀವಂತ ನೀರು ಜೀವಿಗಳನ್ನು ಬದುಕಿಸಿದ ಆದ್ದರಿಂದ ನೀರು ಎಂಬುದು ಜೀವಾಮೃತ ಅದಿಲ್ಲದಿದ್ದರೆ ಯಾವ ಜೀವಿಯು ಜೀವಿಸಲಾರದು.

ಒಂದೊತ್ತು ಊಟವಿಲ್ಲದಿದ್ದರೂ ನಾವು ಬದುಕಬಹುದು, ಆದರೆ ಒಂದು ತಂಬಿಗೆ ನೀರಿಲ್ಲದೆ ಬದುಕಲು ಸಾದ್ಯವಿಲ್ಲ. ಏಕೆಂದರೆ ನೀರಿಲ್ಲದೆ ನಾವು ಯಾವುದನ್ನು ಕಲ್ಪಿಸಿಕೊಳ್ಳಲು ಸಾದ್ಯವೇ ಇಲ್ಲ. ಆದ್ದರಿಂದ ನೀರನ್ನು ಅತೀ ಹೆಚ್ಚು ಪವಿತ್ರವೆಂದು ಪರಿಗಣಿಸಿದ್ದೇವೆ.

ದೇವಸ್ಥಾನಗಳಲ್ಲಿ ನೀರು ತೀರ್ಥವೆಂದು ಕರೆಸಿಕೊಳ್ಳುವುದು. ಅದರ ಶುದ್ದ ರೂಪದಿಂದಾಗಿಯೇ ಮನುಷ್ಯನ ನಡುವೆ ಮಡಿ–ಮೈಲಿಗೆಗಳು ನಿರ್ಧಾರ ಆಗುವುದು, ಶುದ್ಧೀಕರಣದ ಪವಿತ್ರ ಜಲವನ್ನಾಗಿ ನೀರನ್ನು ಬಳಸುತ್ತೇವೆ. ಜಾತಿಯ ಹೀನತೆ–ಶ್ರೇಷ್ಠತೆಗಳ ತಾರತಮ್ಯ ಕೂಡ ನೀರನ್ನೇ ಅವಲಂಬಿಸಿರುತ್ತದೆ. ನೀರು ಬೇಕಿಲ್ಲದ ಸ್ಥಿತಿಯಾದರೂ ಯಾವುದಿದೆ. ಮೊದಲು ಮನುಷ್ಯ ಅಲೆಮಾರಿ ಸ್ವರೂಪದಿಂದ ಒಂದೆಡೆ ನಿಲ್ಲಲು ಅವರು ಅವಲಂಬಿಸಿದ್ದು ನೀರಿನ ಅಕ್ಕ–ಪಕ್ಕದ ಹಳ್ಳಕೊಳ್ಳದ ಪ್ರದೇಶದಲ್ಲಿ. ಆದ್ದರಿಂದಲೇ ಅದನ್ನು ಹಳ್ಳಕೊಳ್ಳದ ಸಂಸ್ಕೃತಿ ಎನ್ನುತ್ತೇವೆ. ದೊಡ್ಡ ನದಿಗಳ ಪಾತ್ರಗಳಲ್ಲಿ ದೊಡ್ಡ ಪಟ್ಟಣಗಳು ಸೃಷ್ಟಿಯಾಗಲು ನೀರು ಕಾರಣ. ಕುಡಿಯಲು ಮತ್ತು ಕೃಷಿಗೆ ನೀರನ್ನು ಪ್ರಾಚೀನ ಕಾಲದಿಂದಲೂ ಮನುಷ್ಯ ಪಳಗಿಸಿಕೊಂಡು ಬಂದಿದ್ದಾನೆ. ಅದರಿಂದ ರಕ್ಷಣೆ ಪಡೆದು ಜೀವನ ಸಾಗಿಸಿದ್ದಾನೆ. ನೀರಿಲ್ಲದ ಮನುಷ್ಯನ ಬದುಕನ್ನು ಊಹಿಸಲು ಸಾಧ್ಯವಿಲ್ಲ.

ಪೃಥ್ವಿಯ ಮುಕ್ಕಾಲು ಭಾಗ ನೀರಿನಿಂದಲೇ ಕೂಡಿಕೊಂಡಿರುವುದರಿಂದ ಇದನ್ನು ಜಲಾವೃತ ಗೃಹವೆಂದು ಕರೆಯುವರು. ಪೃಥ್ವಿಯ ಒಟ್ಟು ವಿಸ್ತೀರ್ಣ ೫೧೦ ದಶಲಕ್ಷ ಚದರ ಕಿ.ಮೀ ಇದರಲ್ಲಿ ನೀರಿನಿಂದ ಆವರಿಸಿದ ಒಟ್ಟು ಪ್ರದೇಶ ೩೬೧.೮ ದಶಲಕ್ಷ ಕಿ.ಮೀ ಆದರೆ ಈಗ ೧೪೫.೨ ದಶಲಕ್ಷ ಕಿ.ಮೀ ಪ್ರದೇಶ ಭೂಮಿಯ ಪ್ರಮಾಣ ೨೧.೨ರಷ್ಟು ಎಂದು ಗುರುತಿಸಲಾಗಿದೆ. ನೀರು ದ್ರವ ರೂಪದಲ್ಲಿ ಇದೆ ಎಂದು ನಾವೆಲ್ಲ ತಿಳಿದಿದ್ದೇವೆ. ಆದರೆ ಇದರ ಬಗ್ಗೆ ಆಳವಾದ ಅಧ್ಯಯನವನ್ನು ಮಾಡಿದಾಗ ನೀರಿನ ಇನ್ನೆರಡು ರೂಪಗಳನ್ನು ಗುರುತಿಸಬಹುದು. ಅವು ಯಾವೆಂದರೆ ಅನಿಲ ಮತ್ತು ಘನ. ಭೂಮಿಯನ್ನು ಆವರಿಸಿರುವ ವಾಯುವಿನಲ್ಲಿ ಸಾಮಾನ್ಯವಾಗಿ ನೇರ ವಾಯು ಭೂಮಿಯಿಂದ ವಾಯುವಿನಲ್ಲಿ ೧೦ ಕಿ.ಮೀ ಎತ್ತರದವರೆಗೂ ಕಂಡು ಬರುತ್ತದೆ. ನೀರಾವರಿಯು ಮೂಲತಃ ಸಾಗರ, ಸಮುದ್ರ, ಕೆರೆ, ಬಾವಿ, ಕಾಲುವೆ, ಸರೋವರ ಮುಂತಾದದವುಗಳಿಂದ ನೀರು ಬಾಷ್ಪೀಭವನ ಕ್ರಿಯೆಯಿಂದ ವಾಯುಮಂಡಲವನ್ನು ಸೇರಲ್ಪಡುತ್ತವೆ. ಅದರಂತೆ ಆಳ ಪ್ರಮಾಣದಲ್ಲಿ ಮಣ್ಣು ತೇವಾಂಶವನ್ನು ಕಳೆದುಕೊಳ್ಳವುದರಿಂದ ಸಸ್ಯವರ್ಗಗಳ ಬಾಷ್ಪೀಭವನಯಿಂದ ವಿಸರ್ಜನೆಗೊಳಿಸುವುದರಿಂದ ಪ್ರಾಣಿಗಳ ಉಸಿರಾಟ ಹಾಗೂ ಸಾಗರಗಳಲ್ಲಿ ಸಂಭವಿಸುವ ಜ್ವಾಲಾಮುಖಿಗಳಿಂದಲೂ ನೀರು ವಾಯುಮಂಡಲದಲ್ಲಿ ಅನಿಲ ರೂಪದಲ್ಲಿ ಸೇರುತ್ತದೆಯಾದರೂ ಇದರಿಂದಾಗುವ ಬಾಷ್ಪೀಭವನದ ಪ್ರಮಾಣ ಅತ್ಯಂತ ಕಡಿಮೆ. ಆದರೆ ಪ್ರತಿ ವರ್ಷ

ಸಾಗರ, ಸರೋವರ, ಸಮುದ್ರ ಪ್ರದೇಶಗಳಿಂದ ೨.೨೫.೬೦೦ ಘನ ಕಿ.ಮೀ ಕೆರೆ, ಬಾವಿ, ಕಾಲುವೆಗಳಿಂದ ೬೧,೧೫೧ ಘನ ಕಿ.ಮೀ ನೀರು ಬಾಷ್ಪೀಭವನಗೊಂಡು ವಾಯುವಿನಲ್ಲಿ ಸೇರುತ್ತದೆ.[೧೫] ಇಷ್ಟೊಂದು ಪ್ರಮಾಣದಲ್ಲಿ ಬಾಷ್ಪೀಭವನ ಹೊಂದಿದ ನೀರು ಮರಳಿ ಭೂಮಿಯ ಕಡೆಗೆ ಮಳೆಯ ರೂಪದಲ್ಲಿ ಬರುವ ಪ್ರಮಾಣ ಶೇ ೯೮,೦೦೦ ಘನ ಕಿ.ಮೀ ಮಾತ್ರವೇ ಆಗಿದೆ[೧೨].

ಭಾರತದಲ್ಲಿ ಮೂರು ಕಡೆ ನೀರಿದೆ. ಅದಕ್ಕೆ ಪರ್ಯಾಯವಾಗಿ ಭೂಮಿ ಇದೆ. ದಕ್ಷಿಣ ಭಾಗದ ಸುತ್ತಲೂ ಜಲಾವೃತದಿಂದ ಕೂಡಿದೆ. ಉತ್ತರ ಭಾಗದಲ್ಲಿ ಹಿಮಾಲಯದಿಂದ ಆವೃತವಾಗಿದ್ದು, ಅಲ್ಲಿ ಹಲವು ನದಿಗಳು ಜನ್ಮ ತಾಳುತ್ತವೆ. ಬೇಸಿಗೆಯಲ್ಲಿ ತುಂಬಿ ಹರಿಯುತ್ತವೆ. ಉಳಿದಂತೆ ಹಿಮರೂಪ ತಾಳುತ್ತವೆ. ಭಾರತವು ಸಮಶೀತೋಷ್ಣ ವಲಯವಾಗಿರುವುದರಿಂದ ಅಧಿಕ ಮಳೆ ಕಡಿಮೆ ಮಳೆ ಹೀಗೆ ಎರಡು ಸ್ವರೂಪದ ಪ್ರದೇಶಗಳಿವೆ. ಉತ್ತರದಲ್ಲಿನ ನದಿಗಳು ಬೇಸಿಗೆಯಲ್ಲಿ ಉಕ್ಕಿ ಹರಿದರೆ, ಋತುಮಾನಗಳಲ್ಲಿ ಹಿಮದಿಂದ ನಿದ್ರಿಸುತ್ತಿರುತ್ತವೆ. ಎತ್ತರದ ಹಿಮಾಲಯ ಶಿಖರ ಶ್ರೇಣಿಗಳಲ್ಲಿ ಹುಟ್ಟುವ ನದಿಗಳು ಹೆಚ್ಚಾಗಿ ಪೂರ್ವಾಭಿಮುಖವಾಗಿ ಹರಿಯುತ್ತವೆ. ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ ನದಿಗಳು ಹೆಚ್ಚಾಗಿವೆ. ನದಿಗಳಿಂದಾಗಿ ಭಾರತದ ಒಳನಾಡಿನ ನೀರು ಮತ್ತು ಅದರ ಉತ್ಪನ್ನಗಳಿಂದ ಸಮೃದ್ಧವಾಗಿವೆ. ನೂರಾರು ನದಿಗಳು ಭಾರತವನ್ನೇ ಜೀವಂತವಾಗಿಸಿ ಬಿಟ್ಟಿವೆ. ನಿರಂತರ ಇಲ್ಲವೆ ಋತುಮಾನಗಳಿಗುಣವಾಗಿ ಬೇರೆ ಬೇರೆ ಪಾತ್ರವಹಿಸುವ ನದಿಗಳು ಮುಖ್ಯ ಜೀವನ ಶಕ್ತಿಯಾಗಿವೆ. ಸ್ವಾತಂತ್ರೋತ್ತರ ನದಿಗಳ ಅಭಿವೃದ್ಧಿಯಿಂದ ಎಲ್ಲಾ ನದಿಗಳಿಗೂ ಆಣೆಕಟ್ಟುಗಳನ್ನು ಕಟ್ಟಿದ್ದು ಮುಖ್ಯವಾಗಿ ವ್ಯವಸಾಯದ ಅಭಿವೃದ್ಧಿಗಾಗಿ ಮತ್ತು ಹಸಿರು ಕ್ರಾಂತಿಗೆ ನಾಂದಿಯಾಯಿತು. ಭಾರತದ ಆಹಾರ ಸಮಸ್ಯೆಯಿಂದ ಮುಕ್ತವಾಗಿಸಲು ಅಪಾರ ಕಾಡಿನ ಮುಳುಗಡೆ, ಆ ಮೂಲಕ ಜೀವ ವೈವಿದ್ಯತೆಯ ನಾಶ, ಗಿರಿಜನರ ಎತ್ತಂಗಡಿ, ಬೃಹತ್ ಆಣೆಕಟ್ಟು ಮತ್ತು ಉತ್ಪನ್ನಗಳ ಆಗಮನದಿಂದಾಗಿ ಅಭಿವೃದ್ಧಿಯೆಂಬುದು ತೋರಿಕೆಯ ಕಾರ್ಯವಾಯಿತು. ಕಣ್ಣಿಗೆ ಕಾಣುವ ಅಭಿವೃದ್ಧಿ ಅಧಿಕವಾಯಿತು. ನೀರಿನ ಪ್ರಮುಖ ಶೇಖರಣಾ ಕ್ರಮವಾಗಿ ಆಣೆಕಟ್ಟುಗಳು ಹೆಚ್ಚಿನ ಮಹತ್ವವನ್ನು ಪಡೆದವು. ಭಾರತದಲ್ಲಿ ಚಿರಾಪುಂಜಿಯಂತಹ ಅತೀ ಹೆಚ್ಚು ಮಳೆಯಾಗುವ ಪ್ರದೇಶಕ್ಕಿಂತ ಸಹರಾದಂತ ಮರಭೂಮಿ ಪ್ರದೇಶಗಳು ಇವೆ. ಭಾರತ ಒಂದು ಪರ್ಯಾಯ ದ್ವೀಪ, ಒರತೆ ತೋರೆ, ಹಳ್ಳ, ನದಿ, ಸಮುದ್ರ, ಹೀಗೆ ನೀರಿನ ಸಮೃದ್ದವಾದ ದೇಶ ಆದರೆ ಬಹುತೇಕ ನದಿಗಳು ನೀರು ಬಳಕೆಗಿಂತ ಸಮುದ್ರ ಸೇರುವುದೇ ಅಧಿಕ .ಸಮಶಿತೋಷ್ಣ ಮುಂತಾದ ಭಾರತದಲ್ಲಿ ನಿತ್ಯ ಹರಿದ್ವರ್ಣ ಕಾಡುಗಳು, ಕುರುಚಲು ಗಿಡಗಳು, ಮರಭೂಮಿ ಮೂರು ಬಗೆಯ ಪ್ರದೇಶಗಳಿಂದ ಕೂಡಿದೆ. ಪಶ್ಚಿಮ ಘಟ್ಟಗಳು ಜೀವ ವೈವಿಧ್ಯತೆಗೆ ಪ್ರಸಿದ್ದವಾದವು. ಅತೀ ಹೆಚ್ಚು ಮಳೆಯನ್ನು ತಮ್ಮತ್ತ ಆಕರ್ಷಿಸುವ ಶಕ್ತಿಯನ್ನು ಪಡೆದುಕೊಂಡಿದೆ[೧೩].

ನೀರಿನ ಉಗಮ ಸ್ಥಾನವನ್ನು ಕಂಡು ಹಿಡಿಯಲು ಪ್ರಾಚೀನರು ಅನುಸರಿಸುತ್ತಿದ್ದ ಮಾರ್ಗಗಳ ಬಗೆಗೆ ಕನ್ನಡ ವಿಶ್ವಕೋಶವಾದ ಲೋಕೋಪಕಾರ (೧೦೨೪) ದಲ್ಲಿ ಉದಕಾರ್ಗಳ ಎಂಬ ಅಧ್ಯಾಯದಲ್ಲಿ ಗಿಡಗಳು, ಮರಗಳು, ಬಳ್ಳಿಗಳು ಮತ್ತು ಇತರ ವಿಧವಾದ ಪರಿಸ್ಥಿತಿ ಇವುಗಳ ಪಟ್ಟಿಯನ್ನು ಕೊಟ್ಟು ನೀರಿನ ಮೂಲವನ್ನು ಅವು ತೋರಿಸಿಕೊಡುತ್ತವೆ ಎಂದು ಹೇಳಿವೆ. ಹಾಗೇಯೇ "ಮುಳ್ಳುಗಳಿಲ್ಲದ ಬನ್ನಿವೃಕ್ಷ ಮತ್ತು ದೊಡ್ಡ ಹುತ್ತವಿರುವ ಕಡೆ ಆಳ ಪ್ರಮಾಣ ಅಗೆದರೆ ನೀರು ದೊರೆಯುತ್ತದೆ. ಮತ್ತೊಂದು ಪದ್ಯದ ಪ್ರಕಾರ ಬೆರಿಲ್, ಕಾಗೆಬಂಗಾರ, ಪಾದರಸ ಅಥವಾ ಅತ್ತಿಮರ ಇರುವ ಕಡೆ ಖಂಡಿತವಾಗಿಯೂ ನೀರನ್ನು ಪಡೆಯಬಹುದು.

ಭಾರತದಲ್ಲಿ ಜಲದ ಉಪಯೋಗವನ್ನು ಸಿಂಧೂ ಬಯಲಿನ ನಾಗರಿಕತೆಯಿಂದಲೇ ಬೆಳೆದು ಬಂದಿವೆ ಎಂದು ಗುರುತಿಸುತ್ತಾರೆ. ಇಲ್ಲಿನ ನೀರಾವರಿ ಪದ್ಧತಿಗಳಲ್ಲಿ ಕಾಲುವೆ, ಈಜುಕೋಳ, ಬಾವಿ, ಒಳಚರಂಡಿ ವ್ಯವಸ್ಥೆ, ಸ್ನಾನಗೃಹ, ನಗರಬೀದಿ ಇತರ ಲಕ್ಷಣಗಳು ಕಂಡುಬರುವುದರಿಂದ ನಾಗರಿಕತೆಯ ಮೊದಲ ಹಂತವನ್ನು ನೋಡಬಹುದು. ದಕ್ಷಿಣ ಭಾರತದಲ್ಲಿ ಬೃಹತ್ ಶಿಲಾ ಸಂಸ್ಕೃತಿಯಿಂದಲೂ ನೀರಿನ ಬಳಕೆ ಆರಂಭಗೊಂಡಿತು[೧೪].

ವೇದ ಬ್ರಾಹ್ಮಣಗಳಲ್ಲಿ ನದಿ, ಕೆರೆ, ಕಾಲುವೆಗಳ ಉಲ್ಲೇಖವಿದೆ. ಗಂಗಾ ಬಯಲಿನ ಆರ್ಯರ ಬದುಕು ಸಂಘಟನೆಯಿಂದ ಪ್ರೇರಿತವಾಗಿತ್ತು. ಆರ್ಯರೊಡನೆ ಕಾದಾಡಿದ ಅಸುರರ ಸಮುದ್ರತೀರದಲ್ಲಿ ನೆಲೆಸಿದ್ದರು. ಈ ಕಾಲದಲ್ಲಿ ಭಾರತವು ಕೃಷಿ ಸಂಪದ್ಭರಿತವಾಗಿತ್ತು ಎನ್ನುವುದಕ್ಕೆ ಇಲ್ಲಿನ ವಾಯುಗುಣ, ಮಳೆ, ಬೆಳೆಗಳು ಕಾರಣವಾಗಿವೆ[೧೫].

ತಿರುವಳ್ಳುವರ್ ಹೇಳುವಂತೆ ಜಲವಿರದಿದ್ದರೆ ಈ ಜಗತ್ತೇ ನಿರ್ಮಾಣವಾಗುತ್ತಿರಲಿಲ್ಲ. ನೀರು ಇಲ್ಲದಿದ್ದರೆ ಋತುಮಾನಗಳೇ ಸಂಭವಿಸುತ್ತಿರಲಿಲ್ಲ ಎಂಬುದು ನಿರ್ವಿವಾದ ಸಂಗತಿ. ನೀರನ್ನು ಚಿನ್ನಕ್ಕಿಂತ ಅಮೂಲ್ಯವೆಂದು ಜನರು ನಂಬಿದ್ದರು. ಬೃಹತ್ ಶಿಲಾ ಸಂಸ್ಕೃತಿಯಲ್ಲಿ ನೀರಿನ ಬಳಕೆಯ ಬಗೆಗೆ ನಿರ್ದಿಷ್ಟ ಕಾಲ ಮಹತ್ವ ಸಿಕ್ಕಂತಾಗಿದೆ. ಈ ಕಾಲಕ್ಕೆ ಸಂಬಂದಪಟ್ಟ ನೆಲೆಗಳ ಉತ್ಪನ್ನ ಮಾಡಿದ್ದು, ಕೃಷ್ಣ, ತುಂಗಭದ್ರಾ, ಕಾವೇರಿನದಿಗಳ ಪರಿಸರದಲ್ಲಿ ಅವು ವ್ಯಾಪಕವಾಗಿವೆ. ಸ್ವಾಭಾವಿಕ ಜಲ ಸಂಪತ್ತು ರಚಿಸಲು ಆಣೆಕಟ್ಟು, ಜಲಾಶಯಗಳು ಹಿಂದೇ ನಿರ್ಮಾಣವಾಗಿದ್ದವು. ಮಳೆ ಬರದಿದ್ದರೂ ನೀರು ಸಂಗ್ರಹಿಸುವ ಕಲೆ ಭಾರತೀಯರಿಗೆ ಈ ಹಿನ್ನೆಲೆಯಲ್ಲಿ ತಿಳಿದಿತ್ತು. ಶೇಕಡಾ ೯೦ರಷ್ಟು ಬೃಹತ್ ಶಿಲಾ ಸಂಸ್ಕೃತಿಯ ನೆಲೆಗಳಲ್ಲಿ ಕೃತಕ ನೀರಾವರಿ ಲಕ್ಷಣವು ಕಂಡುಬಂದಿದೆ. ಕ್ರಿ.ಶ. ೧೮೫೦ ರಲ್ಲಿ ಇವುಗಳನ್ನು ಮೊದಲು ಪತ್ತೆ ಹಚ್ಚಿದವರು

ಮೆಡೋಸ್ ಟೇಲರ್. ಕೃತಕ ನೀರಾವರಿ ಸ್ಥಳಗಳೆಂದರೆ ಬ್ರಹ್ಮಗಿರಿ, ಚಂದ್ರವಳ್ಳಿ, ಮಸ್ಕಿ, ಕೇರಳ, ತಮಿಳುನಾಡು ಇತ್ಯಾದಿ ಕಡೆಗಳಲ್ಲಿ ಕಂಡುಬಂದಿವೆ[೧೬].

ಪ್ರಾಚೀನ ಕಾಲದಲ್ಲಿ ನೀರಾವರಿ ಕಾರ್ಯಗಳಲ್ಲಿ ಕೆರೆ, ಕಾಲುವೆ, ಕೋಡಿಗಳ ನಿರ್ಮಾಣ ಮಹತ್ವದ ಧಾರ್ಮಿಕ, ಸಾಮಾಜಿಕ ಕಾರ್ಯಗಳೆಂಬ ವಿಚಾರ ಶಾಸನಗಳಲ್ಲಿವೆ. ಅಂದಿನ ಕಾಲದ ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಅವಲಂಬಿಸಿದ್ದಿತು. ರಾಜರು ಶ್ರೀಮಂತರು ಮತ್ತು ಗ್ರಾಮ ಸಂಸ್ಥೆಗಳು ಕೆರೆ, ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದೇ ನಂಬಿದ್ದರು. ಕಟ್ಟಿಸಿದ ಕೆರೆ-ಬಾವಿಗಳನ್ನು ಯಾರೇ ಆಗಲಿ ಅಂದಿನ ಕಾಲದಲ್ಲಿ ನಾಶಪಡಿಸುವುದು ಅತ್ಯಂತ ಪಾಪಕರ ಭಾವನೆ ಇದ್ದಿತು.

ಈ ದೇಶದ ಎರಡು ಶ್ರೇಷ್ಠ ಮಹಾಕಾವ್ಯಗಳೆಂದರೆ 'ಮಹಾಭಾರತ' ಮತ್ತು 'ರಾಮಾಯಣ' ಮಹಾಭಾರತದ 'ಅನುನಾಶಿಕ ಪರ್ವವು' ಮಹಾರಾಜನಾದಂತವನು ಕೈಗೊಳ್ಳಲುಬೇಕಾದ ಪ್ರಜಾಹಿತಾತ್ಮಕ ಕಾರ್ಯಗಳಲ್ಲಿ ಕೆರೆಗಳ ನಿರ್ಮಾಣವು ಒಂದು ; ಅದಲ್ಲದೇ ನಾಲೆಗಳ(ಕಾಲುವೆ) ನಿರ್ಮಾಣವು ಪ್ರಜಾಹಿತಾತ್ಮಕ ಕೆಲಸವೆಂದು ವಿವರಿಸುತ್ತದೆ.[೧೭] ಮತ್ತೊಂದು ವಿಶೇಷವೆಂದರೆ ನಾರದನು ಧರ್ಮರಾಯನಿಗೆ ಮಳೆಯನ್ನು ನೆಚ್ಚಿಕೊಂಡು ಬೇಸಾಯಕ್ಕೆ ತೊಡಗಬಾರದೆಂತಲೂ ಹಾಗೂ ಕೆರೆ ಮತ್ತು ಸರೋವರಗಳನ್ನು ನಿರ್ಮಿಸಿಕೊಂಡು ಬೇಸಾಯಕ್ಕೆ ತೊಗಬೇಕು ಎಂದು ಹೇಳುತ್ತಾನೆ. ಪ್ರಾಚೀನ ಭಾರತದಲ್ಲಿ ಹವಾಮಾನವು ಒಂದೇ ರೀತಿಯಾಗಿರದೇ ಮಳೆಯು ಕೆಲವೊಮ್ಮೆ ಬರುತ್ತಿರಲಿಲ್ಲ. ಇದರಿಂದ ಅಂದಿನ ಹವಾಮಾನವನ್ನು ಕುರಿತಂತೆ ನಮ್ಮ ನಿಲುವನ್ನು ಸ್ಪಷ್ಟಪಡಿಸಕೊಳ್ಳಬಹುದು. ಎರಡನೆಯದಾಗಿ ಮಳೆಯು ನೀರಿನ ಪರ್ಯಾಯ ವ್ಯವಸ್ಥೆಯೆಂದು ಕೆರೆ ಮತ್ತು ಸರೋವರ ನಿರ್ಮಾಣಗಳ ಕಾರ್ಯವನ್ನು ಅಂದಿನ ರಾಜರು ಕೈಗೊಳ್ಳುತ್ತಿದ್ದರು. ಪ್ರಾಚೀನ ಭಾರತದ ಕೆರೆಗಳ ನಿರ್ಮಾಣ ಕುರಿತಂತೆ ಈ ಕೆಳಕಂಡ ದಾಖಲೆಗಳು ಪ್ರಮುಖ ಆಕರಗಳಾಗಿವೆ. 'ಪದ್ಮ ಪುರಾಣ'ದಲಲ್ಲಿ ಕೆರೆಗಳ ನಿರ್ಮಾಣದ ಕುರಿತು 'ವಿಷ್ಣು ಧರ್ಮೋತ್ತರ' ಹಾಗೂ 'ದೇವಿ ಪುರಾಣ'ಗಳು 'ನದಿವಾಹಾಸ್' ಅಂದರೆ ನೀರಾವರಿ ಕಾಲುವೆಗಳ ಬಗೆಗೆ ಮತ್ತು ನದಿ, ಕೆರೆ, ತಟಾಕಗಳ ಬಗೆಗೆ ವಿವರಗಳಿವೆ.

ಕೌಟಿಲ್ಯನ 'ಅರ್ಥಶಾಸ್ತ್ರ[೧೮] ದಲ್ಲಿ ಆಹಾರದಲ್ಲಿ ಧಾನ್ಯಗಳನ್ನು, ಕೃತಕ ನೀರಾವರಿ ಕಾಲುವೆಗಳಿಂದ, ನೀರನ್ನು ಹರಿಸುವ, ಏತ ನೀರಾವರಿ, ಕಪ್ಪಾಲಿಗಳನ್ನು ಕಾಣುತ್ತೇವೆ.

ಬುದ್ಧನ 'ಜಾತಕ ಕಥೆ'[೧೯] ಕೆರೆ ಮತ್ತು ಬೇಸಾಯದ ಬಗೆಗೆ ಕೆಲವು ಉಪಯುಕ್ತ ಮಾಹಿತಿಗಳನ್ನು ಒದಗಿಸುತ್ತವೆ.

ಮೇಗಾಸ್ತಾನಿಸ್‌ನ 'ಇಂಡಿಕಾ'[೨೦] ದಲ್ಲಿ ಭೂಮಿಯ ಅನುಗುಣವಾಗಿ ಕೆರೆಗಳ ನೀರನ್ನು ಸಮರ್ಪಕವಾಗಿ ವಿತರಿಸುವುದು. ನಾಲೆ ಮತ್ತು ತೂಬುಗಳನ್ನು ದುರಸ್ತಿ ಮಾಡಿ ಸುಸ್ಥಿತಿಯಲ್ಲಿ ಇರುವಂತೆ ನೋಡಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ.

ಶುಕ್ರನು ರಚಿಸಿದ 'ನೀತಿಸಾರ'[೨೧] ಕೆರೆ ಮತ್ತು ನಾಲೆಗಳ ಬಗೆಗೆ ಮಾಹಿತಿ ಇದೆ. ಆನ ಸಾಮಾನ್ಯರಿಗೆ ನೀರಾವರಿ ಸೌಕರ್ಯ ಒದಗಿಸಿಕೊಟ್ಟ ಪ್ರತಿಫಲವಾಗಿ ತೆರಿಗೆಯನ್ನು ವಿಧಿಸಬೇಕೆಂಬ ಮಾಹಿತಿಯನ್ನು ತಿಳಿಸುವುದು ವಿಶೇಷವಾದ ಸಂಗತಿಯಾಗಿದೆ. ಕಲಘಟಗಿ ತಾಲೂಕಿನಲ್ಲಿ ಹಲವು ಕೆರೆಗಳು ನಿರ್ಮಾಣಗೊಂಡಿವೆ. ಎಂಬುದಕ್ಕೆ ಶಾಸನಗಳು, ಮೌಖಿಕ ಸಾಹಿತ್ಯ ಮತ್ತು ಐತಿಹ್ಯಗಳು ಆಧಾರವಾಗಿವೆ.

**ಕೆರೆಗಳ ನಾಮಾವಳಿಗಳು :**

ಕೆರೆಯನ್ನು ಕಟ್ಟಿಸುವುದು ಧಾರ್ಮಿಕ ಕಾರ್ಯವೆಂದು ದೇವಾಲಯ ನಿರ್ಮಾಣದಷ್ಟೇ ಮಹೋನ್ನತ ಕಾರ್ಯವೆಂಬುದು ನಮ್ಮ ಹಿರಿಯರ ನಂಬಿಕೆಯಾಗಿತ್ತು. ಧಾರ್ಮಿಕ ಭಾವನೆಗಳಿಂದಾಗಿ ಅಂದಿನ ನೀರಾವರಿ ಕಾರ್ಯಕ್ಕೆ ಚಾಲನೆ ದೊರೆಯಿತು.

ಕೆರೆಗಳನ್ನು ಕಟ್ಟಿಸಿ ಅದಕ್ಕೊಂದು ಹೆಸರಿಡುವುದು ಸಾಮಾನ್ಯವಾಗಿತ್ತು. ಕೆರೆಗಳ ನಾಮಾವಳಿಯೆ ಒಂದು ರೋಚಕ ಇತಿಹಾಸ. ಶಬ್ದಾರ್ಥವಾಗಿ ಕೆರೆಯನ್ನು ಕಟ್ಟೆ, ಕುಂಟೆ, ತಟಾಕ, ಸರೋವರ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ಹಳೆಯ ಕಾಲದಲ್ಲಿ ನಿರ್ಮಾಣವಾದ ಕೆರೆಗಳಿಗೆ ನಾಮಕರಣ ಮಾಡಿರುವುದನ್ನು ಈ ಕೆಳಗಿನಂತೆ ವರ್ಗೀಕರಿಸಬಹುದಾಗಿದೆ[೨೪].

೧. ಗಾತ್ರ ಮತ್ತು ಆಕೃತಿಗನುಣವಾದ ಕೆರೆಯ ಹೆಸರುಗಳು

೨. ಪ್ರಭುತ್ವ ಮೂಲದ ಕೆರೆಯ ಹೆಸರುಗಳು

೩. ಧಾರ್ಮಿಕ ಮೂಲದ ಕೆರೆಯ ಹೆಸರುಗಳು

೪. ಸಾಧುಸಂತರ ಹೆಸರಿನ ಕೆರೆಗಳು

೫. ವೃತ್ತಿ ಮೂಲದ ಕೆರೆಯ ಹೆಸರುಗಳು

೬. ಸಸ್ಯ ಮೂಲದ ಕೆರೆಯ ಹೆಸರುಗಳು

೭. ಊರಿನ ಹೆಸರುಗಳೊಂದಿಗೆ ಬೆಸೆದುಕೊಂಡ ಕೆರೆಯ ಹೆಸರುಗಳು

೧. ಗಾತ್ರ ಮತ್ತು ಆಕೃತಿಗನುಣವಾದ ಕೆರೆಯ ಹೆಸರುಗಳು

ಒಂದು ಊರಿನಲ್ಲಿ ಒಂದಕ್ಕಿಂತ ಹೆಚ್ಚಿನ ಕೆರೆಗಳಿದ್ದಾಗ ಅವುಗಳನ್ನು ಸುಲಭವಾಗಿ ಗುರುತಿಸಲು ಬೇರೆ ಬೇರೆ ಹೆಸರಿನಿಂದ ಕರೆಯುವುದು ವಾಡಿಕೆ. ಉದಾಹರಣೆಗೆ; ಹ್ಯಾರಡ ಗ್ರಾಮದಲ್ಲಿ ಎರಡು ಕೆರೆಗಳಿದ್ದು, ೧) ಹೊಸಮಲಿಯಮ್ಮನಕೆರೆ ೨) ಹಳೆಮಲಿಯಮ್ಮನಕೆರೆ ಹಾಗೆಯೇ ಗಾತ್ರದಲ್ಲಿ ಅರಳಿಹಳ್ಳಿಕೆರೆ, ಹೀರೆಮಲ್ಲನಕೆರೆ, ಹೀರೆಹಡಗಲಿಯಕೆರೆ, ಹಗರನೂರುಕೆರೆ, ದಾಸನಹಳ್ಳಿಕೆರೆ ಇವು ಗಾತ್ರದಲ್ಲಿ ದೊಡ್ಡಕೆರೆಯಾಗಿವೆ. ಗಾತ್ರಗಳಲ್ಲಿ ಚಿಕ್ಕಕೆರೆಗಳೆಂದರೆ ಉದಾಹರಣೆಗೆ; ಕಾಂತೇಬೆನ್ನೂರುಕೆರೆ, ಸೋವೆನಕಾಂತೇಬೆನ್ನೂರು ಕೆರೆಯು ವೃತ್ತಾಕಾರದ ಚಿಕ್ಕ ಕೆರೆಯಾಗಿದೆ. ಹೀಗೆ ಹೂವಿನ ಹಡಗಲಿ ತಾಲೂಕಿನಲ್ಲಿ ಗಾತ್ರ ಮತ್ತು ಆಕೃತಿಗನುಗುಣವಾದ ಇನ್ನೂ ಅನೇಕ ಕೆರೆಗಳನ್ನು ಕಾಣಬಹುದಾಗಿದೆ.

**೨. ಪ್ರಭುತ್ವ ಮೂಲದ ಕೆರೆಯ ಹೆಸರುಗಳು :**

ಈ ಪರಿಸರದಲ್ಲಿ ಊರ ಗೌಡರು, ದಾಸರ ಹೆಸರಿನಲ್ಲಿರುವ ಕೆರೆಗಳನ್ನು ಕಾಣುತ್ತೇವೆ. ಉದಾಹರಣೆಗೆ: ಹೀರೆಮಲ್ಲನ ಕೆರೆ, ದಾಸರಹಳ್ಳಿಕೆರೆ ಇವೆ. ಗೌಡರು ಹಾಗೂ ದಾಸರು ನಿರ್ಮಿಸಿರುವ ಕೆರೆಗಳು ಇಂದಿಗೂ ಬಳಕೆಯಲ್ಲಿವೆ. ಅವು ನೂತನವಾಗಿ ನಿರ್ಮಾಣಗೊಂಡ ಕುಡಿಯುವ ಹಾಗೂ ವ್ಯವಸಾಯಕ್ಕೆ ನೀರನ್ನು ಪೂರೈಸಲು ನಿರ್ಮಿಸಿದ ಕೆರೆಗೆ 'ಗೌಡರ ಕೆರೆ' ಎಂದು ಕರೆಯಲಾಯಿತು. ಈ ಕೆರೆಯ ನೀರನ್ನು ಇಂದಿಗೂ ಉಪಯೋಗಿಸುತ್ತಾರೆ.

**೩) ಧಾರ್ಮಿಕವಾಗಿ ಮೂಲದ ಕೆರೆಯ ಹೆಸರುಗಳು :**

ಗ್ರಾಮದೇವರ, ದೇವತೆಯ, ಹೆಸರಿನಲ್ಲಿ ಕಟ್ಟಿಸಿದ ಕಲ್ಲವ್ವ, ಕಲ್ಲಪ್ಪ, ಗಂಗಮ್ಮ, ರಾಮ, ಭೀಮ, ಹನುಮ, ಬಸವ, ಲಕ್ಷೀ, ದ್ಯಾಮವ್ವ, ಚೌಡವ್ವ ಹೀಗೆ ಅನೇಕ ಕೆರೆಗಳಿವೆ. ಉದಾ : 'ಹ್ಯಾರಡ ದಲ್ಲಿ ಕಟ್ಟಿಸಿದ, ಹೊಸಮಲಿಯಮ್ಮನಕೆರೆ, ಹಳೆಮಲಿಯಮ್ಮನಕೆರೆ ಕೆರೆಗಳನ್ನು ಹೆಸರಿಸಬಹುದು[೨೬].

**೪) ಸಾಧುಸಂತರ ಹೆಸರಿನ ಕೆರೆಗಳು :**

ಹೂವಿನ ಹಡಗಲಿ ತಾಲೂಕಿನ ದಾಸರಹಳ್ಳಿ ಎಂಬ ಗ್ರಾಮದಲ್ಲಿ ದಾಸರು ನಿರ್ಮಿಸಿದಂತಹ ಕೆರೆ ಕಂಡುಬಂದಿದೆ. ಇದಕ್ಕೆ ಒಳ್ಳೆಯ ಉದಾಹರಣೆ ಎಂದರೆ, ದಾಸರಹಳ್ಳಿಯ ಕೆರೆ ನಿರ್ಮಾಣವಾಗಿರುವುದನ್ನು ನಾವು ಕಾಣುತ್ತೇವೆ.[೨೭].

**೫) ಸಸ್ಯದ ಮೂಲ ಹೆಸರಿನ ಕೆರೆಗಳು :**

ಸಸ್ಯದ ಮೂಲದ ಹೆಸರಿನ ಕೆರೆಗಳು ಕರ್ನಾಟಕದಾದ್ಯಂತ ಇವೆ. ಕೆರೆಯನ್ನು ಕಟ್ಟಿದ ಮೇಲೆ ಕೆರೆಯ ಒಡ್ಡಿನ ಹೊರ ಭಾಗದಲ್ಲಿ ಹುಲ್ಲನ್ನು ಬೆಳೆಸುವದು, ಫಲ ಕೊಡುವ ಗಿಡ ಮರಗಳನ್ನು ನೆಡುವುದು ಸಾಮಾನ್ಯವಾದ ಸಂಗತಿ. ಇದರಿಂದ ಮಣ್ಣಿನ ಒಡ್ಡಿನ ಒಡ್ಡು ಜಾರದೆ ಭದ್ರವಾಗಿ ಉಳಿಯಲು ನೆರವಾಗುತ್ತದೆ. ನಮ್ಮ ಹಿರಿಯರು ಕೆರೆ ಕಟ್ಟಿದ ಮೇಲೆ ತಪ್ಪದೇ ಮಾಡುತ್ತಿದ್ದ ಎರಡು ಕಾರ್ಯಗಳೆಂದರೆ ಒಂದು ಮರ

ಬೆಳೆಸುವುದು, ಮತ್ತೊಂದು ಗುಡಿ ಕಟ್ಟುವುದು. ಮರಗಳಿಂದಾಗಿ ಪರಿಸರ ತಂಪಾಗಿ ಉಳಿದು, ಪ್ರಾಣಿ ಪಕ್ಷಿಗಳಿಗೆ ಆಶ್ರಯ ದೊರೆಯುತ್ತಿತ್ತು. ಕೆರೆಯ ಒಡ್ಡಿನ ಹತ್ತಿರ ಯಾವ ಜಾತಿಯ ಮರಗಳಿರುತ್ತಿದ್ದವೋ, ಆ ಮರದ ಹೆಸರಿನಿಂದ ಕೆರೆಯನ್ನು ಕಟ್ಟುವುದೂ ವಾಡಿಕೆ[೨೭]. ಉದಾ: ಹೀರೆಮಲ್ಲನಕೆರೆಯ ಏರಿನ ಮೇಲಿ ಆಲದ ಮರ, ದೇವಗೊಂಡನಹಳ್ಳಿ ಕೆರೆ ಏರಿಯ ಮೇಲೆ ಆಲದಮರ ಹೀಗೆ ಇನ್ನೂ ಅನೇಕ ಕೆರೆಗಳ ಮೇಲೆ ಸಸ್ಯಗಳನ್ನು ನೆಟ್ಟಿರುವುದನ್ನು ನೋಡಬಹುದು.

**೬) ಊರಿನ ಹೆಸರುಗಳೊಂದಿಗೆ ಬೆಸೆದುಕೊಂಡ ಕೆರೆಗಳು :**

ಹೂವಿನ ಹಡಗಲಿಯ ತಾಲೂಕಿನಲ್ಲಿ ಊರಿನ ಹೆಸರಿನೊಂದಿಗೆ ಬೆಸೆದುಕೊಂಡಿರುವಂತಹ ಕೆರೆಗಳು ತುಂಬಾ ಇವೆ. ಉದಾ: ಹೀರೆಮಲ್ಲನಕೆರೆ, ಮೂದೆನೂರುಕೆರೆ, ತಳಕಲ್ಲುಕೆರೆ, ಹೊಳಗುಂದಿಕೆರೆ, ನಾಗತಿಬಸಾಪುರಕೆರೆ, ತುಂಬಿನಕೆರೆ, ಹಗರನೂರುಕೆರೆ, ದಾಸನಹಳ್ಳಿಕೆರೆ ಹೀಗೆ ಸಾಮಾನ್ಯವಾಗಿ ಹೂವಿನ ಹಡಗಲಿಯ ಅಥವಾ ಕರ್ನಾಟಕದಲ್ಲಿನ ಅನೇಕ ಕೆರೆಗಳು ಊರಿನ ಹೆಸರಿನೊಂದಿಗೆ ಬೆಸೆದುಕೊಂಡಿರುವುದನ್ನು ಕಾಣುತ್ತೇವೆ.



**ಕೆರೆಗಳ ವರ್ಗೀಕರಣ :**

ಶಾಸನ ಹಾಗೂ ಹಲವಾರು ಕೃತಿಗಳಲ್ಲಿ ಜಲಾಶಯಗಳನ್ನು ವಿವಿಧ ಹೆಸರುಗಳಿಂದ ಉಲ್ಲೇಖಿಸಿರುವುದು ಕಂಡುಬರುತ್ತದೆ. ನಮ್ಮ ಪೂರ್ವಜರು ಜಲಾಶಯಗಳನ್ನು ನೀರಾವರಿ ಒಂದೇ ಅಲ್ಲದೆ ಬೇರೆ ಬೇರೆ ಉದ್ದೇಶಗಳಿಗೆ ಕೂಡ ನಿರ್ಮಾಣ ಮಾಡುತ್ತಿದ್ದರು. ವಿವಿಧ ರೀತಿಯ ಕೆರೆಗಳ ಪ್ರಕಾರಗಳೆಂದರೆ ಕೆರೆ, ಕುಂಟೆ, ಕಟ್ಟೆ, ಮದಗ, ಸರೋವರ, ತಟಾಕ, ಕೊಳ, ಕಲ್ಯಾಣಿ, ತೀರ್ಥ, ಪುಷ್ಕರಣಿ, ದೊಣೆ ಇವುಗಳಲ್ಲಿ ಕೆರೆ ಎಂಬುದು ಹೆಚ್ಚು ಗ್ರಂಥಸ್ಥವಾಗಿರುವುದು ತಿಳಿದುಬರುತ್ತದೆ. ಇವುಗಳಲ್ಲಿ ಕೊಳ, ಕಲ್ಯಾಣಿ, ತೀರ್ಥ, ಪುಕ್ಷರಣಿ, ಧಾರ್ಮಿಕ ಜಲಾಶಯಗಳಾಗಿ, ದೇವರ ಆರಾಧನೆಯ ಉದ್ದೇಶ ಹಾಗೂ ದೇವಾಲಯದ ಇತರ ಕಾರ್ಯಗಳಾಗಿ ನಿರ್ಮಾಣವಾದವು. ಸಾಮಾನ್ಯವಾಗಿ ಇವು ದೇವಾಲಯಕ್ಕೆ ಹೊಂದಿಕೊಂಡೆ ಇರುವ ಜಲಾಶಯಗಳು ಉಳಿದವುಗಳು ನೀರಾವರಿ ಹಾಗೂ ಜನಜಾನುವಾರು ಕುಡಿಯಲು ಬಳಸುವ ಜಲಾಶಯಗಳು.

**ಗಾತ್ರಕ್ಕನುಗುಣವಾದ ವರ್ಗೀಕರಣ :**

**ದೊಡ್ಡ ಕೆರೆ** : ಒಂದು ಕೆರೆಯ ಜಮೀನಿಗೆ ನೀರುಣಿಸುವ ಸಾಮರ್ಥ್ಯದ ಮೇಲೆ ದೊಡ್ಡ ಕೆರೆ, ಸಣ್ಣ ಕೆರೆ ಎಂದು ವಿಂಗಡಿಸಲಾಗುತ್ತದೆ. ಇವುಗಳೆಲ್ಲಾ ದೇವ ಮಾತೃಕ ಕೆರೆಗಳು ಇರಬಹುದು ನದಿ ಮಾತೃಕ ಕೆರೆಗಳಿರಬಹುದು, ದೊಡ್ಡ ಕೆರೆಯನ್ನು ಹಿರಿಯ, ಪಿರಿಯ ಗುಣವಾಚಕಗಳಿಂದ ನಿರ್ದೇಶಿಸಲಾಗುತ್ತದೆ. ದೊಡ್ಡ ಕೆರೆ ಎಂದರೆ ಸಾಮಾನ್ಯವಾಗಿ ೩೦೦ ಎಕ್ರೆಗಿಂತ ಹೆಚ್ಚು ನೀರಿನ ಸಾಮರ್ಥ್ಯವುಳ್ಳ ಕೆರೆಗಳು. ಹೂವಿನ

ಹಡಗಲಿ ತಾಲೂಕಿನಲ್ಲಿ ಅರಳಿಹಳ್ಳಿ ಕೆರೆಯು ೧೯೦೦ ಎಕರೆ, ದಾಸನಹಳ್ಳಿಕೆರೆ ೭೧೪ ಎಕರೆ, ಹಗರನೂರುಕೆರೆ ೪೧೨ ಎಕರೆ, ಹೀರೆಮಲ್ಲನಕೆರೆ, ತಳಕಲ್ಲುಕೆರೆ ೬೯೦ ಎಕರೆ ಇದ್ದದ್ದು ಕಂಡು ಬಂದಿದೆ. ಇನ್ನೂ ಅನೇಕ ದೊಡ್ಡಕೆರೆಗಳನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿಸಿರುವುದನ್ನು ಕಾಣಬಹುದು. ಒಂದೇ ಊರಿನಲ್ಲಿ ಹಲವು ಕೆರೆಗಳಿದ್ದಾಗ ಅವುಗಳನ್ನು ಗುರುತಿಸುವುದಕ್ಕಾಗಿ ದೊಡ್ಡಕೆರೆ, ಸಣ್ಣಕೆರೆ ಎಂದು ಕರೆಯುವ ರೂಢಿ ಇದೆ.

**ಸಣ್ಣ ಕೆರೆ :**

ಸಾಮಾನ್ಯವಾಗಿ ೩೦೦ ಎಕ್ರೆಗಿಂತ ಕಡಿಮೆ ನೀರಿನ ಸಾಮರ್ಥ್ಯವುಳ್ಳ ಕೆರೆಗಳನ್ನು ಸಣ್ಣ ಕೆರೆ ಎನ್ನುವರು. ಹೂವಿನ ಹಡಗಲಿ ತಾಲೂಕಿನಲ್ಲಿ ಅನೇಕ ಸಣ್ಣಕೆರೆಗಳಿರುವುದನ್ನು ನೋಡಬಹುದು. ಉದಾ : ಹಿರೇಹಡಗಲಿಯಕೆರೆ, ಸೋಮನಹಳ್ಳಿಕೆರೆ, ಹೊಳಗುಂದಿ ಕೆರೆ, ಕಾಂತೆಬೆನ್ನೂರು ಕೆರೆ, ಹೀಗೆ ಇನ್ನೂ ಮುಂತಾದ ಕೆರೆಗಳಿವೆ. ತಾಲೂಕಿನ ಹ್ಯಾರಡ ಎಂಬ ಗ್ರಾಮದಲ್ಲಿ ಎರಡು ಸಣ್ಣ ಕೆರೆಗಳಿರುವುದು ಕಂಡುಬರುತ್ತದೆ. ತಾಲೂಕಿನಲ್ಲಿ ಅನೇಕ ಸಣ್ಣ ಪುಟ್ಟ ಕೆರೆಗಳು ಕಂಡುಬರುತ್ತವೆ.

**ಅಡಿ ಟಿಪ್ಪಣಿಗಳು :**

೧. ಮುನಿರಾಜಪ್ಪ., ಕರ್ನಾಟಕದ ಕೆರೆ ನೀರಾವರಿ ಅಧ್ಯಯನ, ಪುಟ-೮೯

೨. ವಿರುಪಾಕ್ಷಿ ಪೂಜಾರಹಳ್ಳಿ., ಜಲಸಂಬಂಧಿ ಚಳುವಳಿಗಳು, ಪುಟ-೭

೩. ಅದೇ ಪುಟ-೮

೪. ನೀಲತ್ತಹಳ್ಳಿ ಕಸ್ತೂರಿ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ-೨೭

೫. ಅದೇ ಪುಟ-೨೮

೬. ಬಸವರಾಜ ಕುಂಚೂರು., ನಮ್ಮೂರು ಕೆರೆಗಳು, ಪುಟ-೪೯

೭. ನೀಲತ್ತಹಳ್ಳಿ ಕಸ್ತೂರಿ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ-೨೯

೮. ಅದೇ

೯. ಅದೇ

೧೦. ಅದೇ ಪುಟ-೩೦

೧೧. ನೀಲತ್ತಹಳ್ಳಿ ಕಸ್ತೂರಿ., ಪುರ್ವೋಕ್ತ -೨೮

೧೨. ವಿರುಪಾಕ್ಷಿ ಪೂಜಾರಹಳ್ಳಿ., ಜಲಸಂಬಂಧಿ ಚಳುವಳಿಗಳು, ಪುಟ-೮

೧೩. ಅದೇ

೧೪. ಅದೇ ಪುಟ-೧೦

೧೫. ಅದೇ

೧೬. ಸಿ.ಎಸ್. ವಾಸುದೇವನ್., ಹಂಪಿ ಪರಿಸರದ ಕೆರೆಗಳು, ಪುಟ-೧೪

೧೭. ವಿರುಪಾಕ್ಷಿ ಪೂಜಾರಹಳ್ಳಿ., ಜಲಸಂಬಂಧಿ ಚಳುವಳಿಗಳು, ಪುಟ-೯

೧೮. ಸಿ.ಎಸ್. ವಾಸುದೇವನ್., ಹಂಪಿ ಪರಿಸರದ ಕೆರೆಗಳು, ಪುಟ-೮

೧೯. ಅದೇ ಪುಟ-೯

೨೦. ಅದೇ ಪುಟ-೧೦

೨೧. ಅದೇ

೨೨. ಸಿ.ಎಸ್. ವಾಸುದೇವನ್., ಹಂಪಿ ಪರಿಸರದ ಕೆರೆಗಳು, ಪುಟ-೪

೨೩. ನೀಲತ್ತಹಳ್ಳಿ ಕಸ್ತೂರಿ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ-೭

೨೪. ಬಸವರಾಜ ಕುಂಚೂರು., ನಮ್ಮೂರು ಕೆರೆಗಳು, ಪುಟ-೩೪

೨೫. ಅದೇ ಪುಟ-೩೫

೨೬. ಅದೇ ಪುಟ-೩೬

೨೭. ಅದೇ

೨೮. ಅದೇ ಪುಟ-೩೭

೨೯. ಬಸವರಾಜ ಕುಂಚೂರು., ನಮ್ಮೂರು ಕೆರೆಗಳು, ಪುಟ-೬೬

೩೦. ಅದೇ ಪುಟ-೬೭

## ಅಧ್ಯಾಯ - ನಾಲ್ಕು

## ಹೂವಿನ ಹಡಗಲಿ ತಾಲೂಕಿನ ಪ್ರಮುಖ ಕೆರೆಗಳು

ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳಲ್ಲಿ ಒಂದಾದ ಅದರಲ್ಲೂ ಮಲ್ಲಿಗೆ ನಾಡು ಎಂದು ಪ್ರಸಿದ್ಧಿ ಪಡೆದುಕೊಂಡಿರುವ ಹೂವಿನ ಹಡಗಲಿ ತಾಲೂಕಿನಲ್ಲಿ ಸುಮಾರು ೧೫೦ ಕೆರೆಗಳಿವೆ. ಅದರಲ್ಲಿ ೫೦ ಕ್ಕೂ ಹೆಚ್ಚು ದೊಡ್ಡ ಕೆರೆಗಳು ಮತ್ತು ೧೦೦ ಕ್ಕೂ ಹೆಚ್ಚು ಸಣ್ಣ ಕೆರೆಗಳಿದ್ದು, ಅದರಲ್ಲಿ ಅಧ್ಯಯನಕ್ಕೆ ತಾಲೂಕಿನ ಕೆಲವು ಪ್ರಮುಖ ಕೆರೆಗಳನ್ನು ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಇವುಗಳಲ್ಲಿ ಕೆಲವು ಕೆರೆಗಳು ಪ್ರಾಚೀನ ಕಾಲದ ಕೆರೆಗಳಾಗಿವೆ. ಎಂದು ಶಾಸನಗಳ ಮೂಲಕ ತಿಳಿದುಕೊಳ್ಳಲಾಗಿದೆ. ಹೆಚ್ಚಾಗಿ ಅಧ್ಯಯನದ ಮೂಲಕ ತಿಳಿದು ಬಂದಿದೆ. ಹೆಚ್ಚಾಗಿ ಇಲ್ಲಿನ ಕೆರೆಗಳು ಬ್ರಿಟೀಷರ ಕಾಲದಲ್ಲಿ ನಿರ್ಮಾಣವಾದ ಕೆರೆಗಳು ಇರುವುದು ಕಂಡುಬಂದಿದೆ. ಅವುಗಳನ್ನು ಈ ಕೆಳಗಿನಂತೆ ಚರ್ಚಿಸಬಹುದು.

**ಹಿರೇಹಡಗಲಿಕೆರೆ**

ಹಿರೇ ಹಡಗಲಿಯು ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿ ತಾಲೂಕಿನ ಒಂದು ಪ್ರಮುಖ ಐತಿಹಾಸಿಕ ಸ್ಥಳವಾಗಿದೆ. ಇಲ್ಲಿಯ ಪರಿಸರದಲ್ಲಿ ಕೆರೆಯು ಮಹತ್ವದ ಸ್ಥಾನ ಪಡೆದುಕೊಂಡಿದೆ. ಹೀರೆ ಹಡಗಲಿಯ ಮೂಲ ನಾಮ "ಪೊಸಪಡಂಗಿಲೆ" ಈ ಕೆರೆಗೆ "ಹಿರಿಯಕೆರೆ" ಎಂತಲೂ ಕರೆಯುವರು. ಈ ಕೆರೆಯು ೧೬೬ ಎಕರೆಗಳಲ್ಲಿ ವ್ಯಾಪಿಸಿದ್ದು, ಏರಿಯ ಉದ್ದ ೧೮೯೬ ಮೀ, ಏರಿಯ ಎತ್ತರ ೩.೬೦ ಮೀ. ಅಚ್ಚುಕಟ್ಟು ಪ್ರದೇಶ ೬೭-ಹೆಕ್ಟರ್. ಕೋಡಿಯ ಮಾದರಿ ಪ್ರೀಟವರ್ ಪಾಲ್ ತೂಬುಗಳ ಮಾದರಿ. "ಪ್ಲೆಗ್ ಮತ್ತು ರಾಡ್‌ಟೈಪ್" ಹೀಗೆ ಇದು ತುಂಬಾ ಹಳೆಯದಾದ ಕೆರೆಯಾಗಿದ್ದು, ಇದನ್ನು "ಲೋಕೋಪಯೋಗಿ" ಇಲಾಖೆಯು ೧೯೨೬ ರಲ್ಲಿ ಜೀರ್ಣೋದ್ಧಾರ ಮಾಡಿದೆ. ಈ ಕೆರೆಗೆ "ತುಂಗಭದ್ರ" ನದಿಯಿಂದ ಕೊಳವೆ ಪೈಪ್ ಮುಖಾಂತರ ನೀರು ತರುವಂತ ಕಾರ್ಯವನ್ನು ಮಾಡಲಾಗಿದೆ. ಇದರ ಏರಿಯನ್ನು ಕಪ್ಪು ಮತ್ತು ಬೆಂಚರು ಕಲ್ಲುಗಳಿಂದ ನಿರ್ಮಿಸಲಾಗಿದೆ. ಈ ಕೆರೆ ಏರಿಯ ಮುಂದೆ ಕಲ್ಲೇಶ್ವರ ದೇವಾಲಯ ಮತ್ತು ಮೂರು ಶಿಲಾ ಶಾಸನಗಳಿವೆ. ಕೆರೆಯ ದಕ್ಷಿಣಕ್ಕೆ ಈಶ್ವರ ಗುಡಿ ಇದ್ದು, ಕೆರೆ ತುಂಬಿದರೆ ಈ ಗುಡಿಯು ಮುಳುಗುತ್ತದೆ. ಈ ಕೆರೆಯ ಹೊಂದಿಕೊಂಡಂತೆ ಏರಿಯ ಮೆಲೆ ಒಂದು ಶಾಸನ ಇರುವುದು ಕಂಡುಬಂದಿದೆ.

ಕ್ರಿ.ಶ. ೧೧೩೩ನೇ ಮಾಘ ಶು.೩ ಆದಿತ್ಯವಾರದಂದಿದ್ದು ಇದು ಕ್ರಿ.ಶ. ೮-೧-೧೨೧೨ರ ಆದಿತ್ಯ ವಾರಕ್ಕೆ ಸಮಾನವಾಗಿತ್ತದೆ. ಹೊಯ್ಸಳ ದೊರೆ ವಿಷ್ಣುವರ್ಧನ ಇಮ್ಮಡಿ ಬಲ್ಲಾಳನು ಹಳ್ಳವುರ ಅಥವಾ ವಿಜಯ ಸಮುದ್ರದ ನೆಲೆವಿಡಿನಿಂದ ಬನವಾಸಿ-೧೨೦೦೦, ನೊಳಂಬವಾಡಿ-೩೨೦೦೦, ಪುಲಿಗೆರೆ-೩೦೦, ಬೆಳವಲ-೩೦೦ ಹಾಗೂ ಮಸಣವಾಡಿ ಮೊದಲಾಗಿ ಹಿದುಕೆ ವರೆಗೆ ಆಳುತ್ತಿದ್ದಾಗ ಆತನ

ಹಿರಿಯ ರಾಣಿ ಪದುಮಲುದೇವಿ ಹಿರೇಹಡಗಲಿಯನ್ನು ಆಳುತ್ತಿದ್ದಳು. ಬ್ರಾಹ್ಮಣ ದಂಡನಾಯಕರಾದ 'ಗಂಗಿಮಯ್ಯ ನಾಯಕ ಮತ್ತು ದಾಮಣ್ಣ ದಂಡನಾಯಕರು ಹಿರಿಯಕೆರೆ ಮತ್ತು ತುಂಬಿನ ಕೆರೆಗಳಿಗೆ ೧೨೦ ಮಹಾಜನಗಳ ಸಮ್ಮುಖದಲ್ಲಿ ಭೂದಾನ ಮಾಡಿದ ಉಲ್ಲೇಖವಿದೆ. ಹಾಗಾಗಿ ಈ ಕೆರೆಯು ಹೊಯ್ಸಳರ ಕಾಲದಲ್ಲಿಯೇ ನಿರ್ಮಾಣವಾಗಿದೆ ಎಂದು ಹೇಳಲಾಗಿದೆ. ಹಾಗಾಗಿ ಹಿರಿಯ ಕೆರೆ ಮತ್ತು ತುಂಬಿನಕೆರೆಗಳು ಅಕ್ಕಪಕ್ಕದಲ್ಲಿರುವುದರಿಂದ ಎರಡು ಕೆರೆಗಳನ್ನು ನಿರ್ಮಿಸಿ. ಹಿರೇಹಡಗಲಿ ಕೆರೆಗೆ ಹಿರಿಯ ಕೆರೆ ಎಂತಲೂ ಕರೆಯುತ್ತಾರೆ. ಈ ಕೆರೆಯು ಇಂದು ಸ್ವಲ್ಪ ಉತ್ತಮ ಸ್ಥಿತಿಯಲ್ಲಿದ್ದು, ಇದಕ್ಕೆ ನೀರನ್ನು ತುಂಬಿಸುವ ಕಾರ್ಯ ನಡೆಯಬೇಕಾಗಿದೆ.

**ಹಗರನೂರು ಅಮರಕೆರೆ**

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನಿಂದ ೭ಕಿ.ಮೀ ದೂರದಲ್ಲಿದಲ್ಲಿರುವ ಹಗರನೂರು ಒಂದು ಪ್ರಮುಖ ಗ್ರಾಮವಾಗಿ ಒಂದು ಉತ್ತಮವಾದ ಕೆರೆಯನ್ನು ಹೊಂದಿರುವುದನ್ನು ನಾವು ಕಾಣುತ್ತೇವೆ. ಹಗರನೂರು ಕೆರೆಗೆ "ಅಮರಗೆರೆ" ಎಂತಲೂ ಕರೆಯುವುದನ್ನು ನಾವು ಕಾಣುತ್ತೇವೆ. ಈ ಕೆರೆಯು ಅತ್ಯಂತ ಹಳೆಯ ಕಾಲದ ಕೆರೆಯಾಗಿದ್ದು ಇದನ್ನು "ಜಕ್ಕಣಾಚಾರ್ಯರು" ನಿರ್ಮಿಸಿದ್ದಾರೆ ಎಂದು ಹೇಳಲಾಗುತ್ತದೆ. ಇದು ೪೧೨ ಎಕರೆ ವಿಸ್ತೀರ್ಣ ಹೊಂದಿದ್ದು, ೨೬೩೦ ಮೀ. ಏರಿಯ ಉದ್ದ. ೪.೪೦ ಮೀ. ಏರಿಯ ಎತ್ತರ. ೧.೩೦ ಕಿ.ಮೀ ಎಡ ಕಾಲುವೆ ೪.೨೦ ಕಿ.ಮೀ ಬಲ ಕಾಲುವೆಗಳಿವೆ. ಕೋಡಿಯ ಮಾದರಿ ಎಡ; ಕ್ಲಿಯರ್ ಓವರ್ ಫಾಲ್. ಬಲಃ ಮರ್ಜಡ್ ವೇರ್ ಎಫ್ ಐ ತೂಬುಗಳ ಮಾದರಿ. ಪ್ಲೇಗ್ ಆಂಡ್ ರಾಡ್‌ಟೈಪ್. ಇದು ಮೂರು(೩) ತೂಬುಗಳನ್ನು ಹೊಂದಿದೆ. ಈ ತೂಬುಗಳಲ್ಲಿ ದೇವರ ಮೂರ್ತಿಗಳಿರುವುದನ್ನು ಕಾಣುತ್ತೇವೆ.

ಹಗರನೂರು ಕೆರೆಕಟ್ಟೆಯ ಬಳಿಯಿರುವ ಬಯಲಿನಲ್ಲಿ ನೆಲೆಸಿರುವ ಕಲ್ಲು. ಶಾಲಿವಾಹನ ಶಕೆ ಪ್ಲವಂಗ ಸಂವತ್ಸರ ಕಾರ್ತಿಕೇಯ ಮಾಸ ಬುಧವಾರವನ್ನು ಉಲ್ಲೇಖಿಸುತ್ತಿರುವುದರಿಂದ ಇದರ ಕಾಲವನ್ನು ಕ್ರಿ.ಶ. ೧೫-೧೦-೧೫೪೭ ಎಂದು ವಿದ್ವಾಂಸರು ತೀರ್ಮಾನಿಸಿದ್ದಾರೆ. ಇದು ವಿಜಯನಗರದ ರಾಜ "ಸದಾಶಿವಮಹಾರಾಯನ" ಆಳ್ವಿಕೆಯ ಕಾಲದ್ದು ಅವರು ಬಯಪ್ಪನಾಚರ ಮಗ ಕೃಷ್ಣಪ್ಪ ನಾಯಕರಿಗೆ "ಅಮರಗೆಯಲ್ಲಿ" ದಾನವನ್ನು ನೀಡಿದರ ಬಗ್ಗೆ ಈ ಶಾಸನದಲ್ಲಿ ಉಲ್ಲೇಖವಿದೆ. ಹಾಗಾಗಿ ಈ ಕೆರೆಯನ್ನು ವಿಜಯನಗರದ ಸದಾಶಿವಮಹಾರಾಯರ ಕಾಲದಲ್ಲಿಯೇ ನಿರ್ಮಿಸಿರಬಹುದು ಎಂದು ಹೇಳಬಹುದು. ಇದು ಒಂದು ಉತ್ತಮವಾದ ಕೆರೆಯಾಗಿದ್ದು ಎರಡು ಗುಡ್ಡಗಳ ಮಧ್ಯದಲ್ಲಿ ಕಂಗೊಳಿಸುತ್ತ ರೈತರಿಗೆ ಹೊಲಗದ್ದೆಗಳಿಗೆ ನೀರೋದಗಿಸುತ್ತಿರುವುದನ್ನು ನಾವು ಕಾಣುತ್ತೇವೆ. ಇಲ್ಲಿ ವರ್ಷಕ್ಕೊಮ್ಮೆ 'ತುಮುನ್ನಪ್ಪ" ದೇವರ ಜಾತ್ರೆಯಾಗುವುದನ್ನು ಕಾಣಬಹುದಾಗಿದೆ.

**ಮುದೇನೂರು ಕೆರೆ**

ಮೂದೇನೂರು ಹೂವಿನ ಹಡಗಲಿ ತಾಲೂಕಿನಿಂದ ೫ಕಿ.ಮೀ ದೂರದಲ್ಲಿದ್ದು, ಈ ಊರನ್ನು ಮುದುಕಪ್ಪ ನಾಯಕ ಕಟ್ಟಿಸಿದ್ದರಿಂದ ಇದಕ್ಕೆ ಮುದೇನೂರು ಕೆರೆ ಎಂದು ಹೆಸರು ಬಂದಿರುವುದನ್ನು ಕಾಣುತ್ತೇವೆ. ಇಲ್ಲಿ ಒಂದು ಸುಂದರವಾದ ಕೆರೆಯನ್ನು ಕಾಣುತ್ತೇವೆ. ಮೂದೇನೂರು ಕೆರೆಯು ಒಟ್ಟು ೨೭೯ ಎಕರೆ ವಿಸ್ತೀರ್ಣ ಹೊಂದಿದ್ದು, ಇಲ್ಲಿ ೧೫೦ ಎಕರೆ ಒತ್ತುವರೆಯಾಗಿರುವುದನ್ನು ಕಾಣುತ್ತೇವೆ. ೨೮೦೩ ಎಕರೆ ಅಚ್ಚುಕಟ್ಟು ಪ್ರದೇಶವನ್ನು ಹೊಂದಿದೆ. ಏರಿಯ ಉದ್ದ ೧೫೦೦ ಮೀ. ಇದ್ದು ಏರಿಯ ಎತ್ತರ ೪.೪೦ ಮೀ. ಇದೆ. ಇದು ಒಂದು ಕೋಡಿಯನ್ನು ಹೊಂದಿದ್ದು, ಒಂದು ತೂಬು ಸಹ ಕೆರೆಯಲ್ಲಿ ಕಂಡುಬಂದಿದೆ. ಇದಕ್ಕೆ ತುಂಗಭದ್ರ ನದಿಯ ಮುಖಾಂತರ ನೀರನ್ನು ಕಾಲುವೆ ಮುಖಾಂತರ ಕೆರೆಗೆ ನೀರನ್ನು ಹರಿಸುತ್ತಾರೆ. ಈ ಕೆರೆಯಲ್ಲಿ ನೀರು ವರ್ಷ ಪೂರ್ತಿ ನೀರು ಇರುವುದನ್ನು ಕಾಣಬಹುದು. ಇಂದು ಕೆರೆಯು ಉತ್ತಮ ಸ್ಥಿತಿಯಲ್ಲಿದ್ದು ಊರಿಂದ ಪೂರ್ವಕ್ಕೆ ಉತ್ತರಾಭಿಮುಖವಾಗಿ ನಿರ್ಮಾಣವಾಗಿದ್ದು ಇದು ಅತ್ಯಂತ ಪ್ರಾಚೀನ ಕೆರೆ ಎಂದು ಕ್ಷೇತ್ರಕಾರ್ಯದ ಮೂಲಕ ತಿಳಿದು ಬಂದಿದೆ.

ಊರನಿಂದ ಪೂರ್ವಕ್ಕೆ ಕೆರೆಯ ಹತ್ತರದ ಶಾಸನ ಈ ಶಾಸನವು ಇಂದು ಮಣ್ಣಿನಲ್ಲಿ ಹೂತು ಹೊಗಿದ್ದು, ಅದರ ಪ್ರತಿ ಲಭಿಸಿದ್ದು ಅದರ ಆಧಾರದ ಮೇಲೆ ಇಲ್ಲಿ ಕೆರೆಯು ನಿರ್ಮಾಣವಾಗಿತ್ತೆಂದು ಹೇಳಬಹುದು. ಈ ಶಾಸನವು ೧೭೭೬ ರ ಕಾಲಾವಧಿಯದ್ದಾಗಿದ್ದು, ತ್ರಿಬುವನಮಲ್ಲ ದೇವನು ಕೆತ್ತಿಸಿದ್ದಾನೆ.

ಗಂಗರ ಮಾರಮ್ಮ ಎಂಬುವವರಿಗೆ ಮೂದೇನೂರು ಭೂಮಿಯನ್ನು ಕಾಣಿಕೆಯಾಗಿ ಮುದೇನೂರು ಗಾವುಂಡನು ನೀಡಿದನ್ನು ಉಲ್ಲೇಖವಿರುವುದನ್ನು ಕಾಣುತ್ತೇವೆ.

**ಮಾನ್ಯರ ಮಸಲವಾಡಕೆರೆ**

ಹೂವಿನ ಹಡಗಲಿಯ ಪ್ರಮುಖ ಗ್ರಾಮವಾಗಿರುವ ಮಾನ್ಯರ ಮಸಲವಾಡವು ಒಂದು ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಇಲ್ಲಿಯು ಒಂದು ಕೆರೆಯನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿಸಲಾಗಿದ್ದು, ಇದು ಊರಿಂದ ೧. ಕಿ ಮೀ. ದೂರದಲ್ಲಿ ಉತ್ತರಾಭಿಮುಖವಾಗಿರುವುದನ್ನು ಕಾಣಬಹುದು. ಈ ಕೆರೆಯು ೨೭೭ ಎಕರೆ ವಿಸ್ತಾರವಾಗಿದ್ದು, ಏರಿಗೆ ಕಪ್ಪು ಮತ್ತು ಬಿಳಿ ಕಲ್ಲುಗಳಿಂದ ನಿರ್ಮಿಸಲಾಗಿದೆ. ಏರಿಯ ಎತ್ತರ ೧೨ ಅಡಿಯಾಗಿದ್ದು ೧೮ ಅಡಿ ಅಗಲವಾಗಿದೆ. ಏರಿಯ ಉದ್ದ ೧೦೫೦ ಮೀ. ಇದು ಒಂದು ತೂಬು ಮತ್ತು ಒಂದು ಕೋಡಿಯನನು ಹೊಂದಿದೆ. ಕೆರೆಗೆ ತುಂಗಭದ್ರ ನದಿಯಿಂದ ನೀರು ತುಂಬಿಸುವ ಕಾರ್ಯ ಸಂಪೂರ್ಣವಾಗಿದೆ. ಕೆರೆ ಏರಿಯ ಮೇಲೆ 'ಹಿರೆಕೇರಮ್ಮ' ದೇವಾಲಯವಿದೆ. ಊರಿನಲ್ಲಿ ಕಲ್ಲೇಶ್ವರ ದೇವಾಲಯದಲ್ಲಿ ಒಂದು ಶಾಸನವಿದೆ. ಊರಿನ ಪೂರ್ವಕ್ಕೆ

ಕಲ್ಲುಮಾಟ ದೇವಾಲಯದಲ್ಲಿ ಒಂದು ಶಾಸನವಿದೆ. ಹಾಗಾಗಿ ಈ ಕೆರೆಯನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೇ ನಿರ್ಮಿಸಿರಬಹುದು ಎಂದು ಹೇಳಬಹುದಾಗಿದೆ.

ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನ ೧೩-೧೦-೧೦೩೬ ಅಲ್ಲಲ್ಲಿ ತೃಟಿತಗೊಂಡಿರುವ ಶಾಸನ ಇದರ ಕಾಲ. ಕ್ರಿಶ. ೨೩-೧೦-೧೦೩೬ ಚಾಲುಕ್ಯ ದೊರೆ ಜಗದೇಕಮಲ್ಲ ದೇವನ(ಇಮ್ಮಡಿ ಜಯಸಿಂಹ) ಆಳ್ವಿಕೆಯನ್ನು ಇದು ಉಲ್ಲೇಖಿಸುತ್ತದೆ. ಅದರ ಜೊತೆಗೆ ಊರಿನ ಪೂರ್ವಕ್ಕೆ ಎರೆಭೂಮಿ ೧೨ ಮತ್ತರನ್ನು ಮತ್ತು ಅಲ್ಲಿಂದ ದಕ್ಷಿಣಕ್ಕಿದ್ದ ೪ ಮತ್ತರನ್ನು ಕಿಸು ಭೂಮಿಯನ್ನು ಅಂತು ಒಟ್ಟಾಗಿ ಮತ್ತರನ್ನು ಮಹದೇವರ ಮುಂದಿನ ಕೆರೆಯನ್ನು ಸರ್ವಬಾದ ಪರಿಹಾರವಾಗಿ ಅಂತಂದ್ರಾ ತಾರಾಂಬರಂ ದತ್ತಿ ಬಿಡಲಾಯಿತು. ಹಾಗಾಗಿ ಈ ಶಾಸನದಲ್ಲಿ ಕೆರೆಯ ಉಲ್ಲೇಖ ಇರುವುದರಿಂದ ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿಸಿರಬಹುದು ಎಂದು ಹೇಳಬಹುದು.

ಈ ಕೆರೆಯು ಇಂದು ಉತ್ತಮ ಸ್ಥಿತಿಯಲ್ಲಿದ್ದು ಇದಕ್ಕೆ ತುಂಗಭದ್ರನದಿಯಿಂದ ನೀರು ತುಂಬಿಸುವ ಕಾರ್ಯ ತುಂಬ ಭರದಿಂದ ಸಾಗಿರುವುದನ್ನು ಕಾಣಬಹುದು.

**ಹೊಳಗುಂದಿ ಕೆರೆ**

ಹೊಳೆಗುಂದಿ ಒಂದು ಇತಿಹಾಸ ಪ್ರಸಿದ್ಧವಾಗಿದ್ದು ಹಡಗಲಿಯಿಂದ ೨ ಕಿ ಮೀ. ದೂರದಲ್ಲಿದೆ. ಹೊಳಗುಂದಿಗೆ "ಪೊಳಲ್ಗುಂದೆ" ಎಂದು "ಪೊಳಗುಗುಂದೆ' ಎಂದು ಶಾಸನಗಳಲ್ಲಿ ಉಲ್ಲೇಖವಿರುವುದನ್ನು ಕಾಣುತ್ತೇವೆ. ಇಲ್ಲಿ ಒಂದು ಚಿಕ್ಕ ಕೆರೆಯು ನಿರ್ಮಾಣವಾಗಿದ್ದು, ಅದಕ್ಕೆ "ಕಲ್ಲುಕೆರೆ" ಎಂದು ಕರೆಯುತ್ತಿದ್ದರು. ಏಕೆಂದರೆ ಅದು ಗುಡ್ಡದ ಕೆಳಗೆ ನಿರ್ಮಾಣವಾಗಿರುವುದರಿಂದ ಅದಕ್ಕೆ ಕಲ್ಲುಕೆರೆ ಎಂದು ಕರೆದಿರಬಹುದು. ಇದು ೫.೪೫ ಎಕರೆ ವಿಸ್ತೀರ್ಣವನ್ನು ಹೊಂದಿದ್ದು ಇದನ್ನು ಕಲ್ಲಿನಿಂದ ನಿರ್ಮಿಸಲಾಗಿದೆ. ಏರಿಯ ಉದ್ದ ೪೯೦ ಮೀ. ಇದೆ. ಎರಿಯ ಎತ್ತರ ೩.೦೪ ಮೀ. ಒಂದು ಚಿಕ್ಕ ಕೋಡಿಯನ್ನು ಹೊಂದಿದೆ. ಇದು ಒಂದು ಪೂರ್ವಾಭಿಮುಖವಾಗಿರುವಂತ ಕೆರೆಯಾಗಿದ್ದು, ಊರಿನ ಮಧ್ಯದಲ್ಲಿ ನಿರ್ಮಿತವಾಗಿದೆ. ಇಲ್ಲಿಗೆ ತುಂಗಭದ್ರ ನದಿಯಿಂದ ನೀರು ಪೂರೈಸಲಾಗುತ್ತದೆ. ಈ ಕೆರೆಯಿಂದ ಅನೇಕ ದನಕರುಗಳಿಗೆ, ಪಕ್ಷಿಗಳಿಗೆ, ಜನರಿಗೆ ಉಪಯೋಗವಾಗುತ್ತಿರುವುದನ್ನು ಕಾಣುತೇವೆ.

ಸೋಮನಾಥ ದೇವಾಲಯದ ಒಳಗಿನ ಶಾಸನ ಇದು ೪-೨-೧೧೯೬ ರಲ್ಲಿ ರಚನೆಯಾಗಿದ್ದು "ವಿಜಯ ಪಾಂಡ್ಯ ದೇವನ" ಆಳಕ್ವಿಕೆಯ ಕಾಲದ್ದು ಶ್ರೀ ನಾಗಚಂದ್ರ ಭಟ್ಟರಕರ ಕಾಲು ತೊಳೆದು ಧಾರಾಪೂರ್ವಕವಾಗಿ ಮಲ್ಲಗಾವುಂಡ ಭೆದ್ಯಭೂಮಿಃ ಕಲ್ಲಕೆಯಿಂದ ದಕ್ಷಿಣಕ್ಕೆ ಸೋಗಿಯ ದಾರಿಯಿಂದ ಉತ್ತರಕ್ಕೆ ಗಡಿಗೆ ಅಂಟಕೊಂಡಿರುವ ೧೦ ಮತ್ತರು ಭೂಮಿಯನ್ನು ಬಿಟ್ಟುಕೊಟ್ಟರು. ಹಾಗಾಗಿ ಈ ಕೆರೆಯ

ಬಗ್ಗೆ ಶಾಸನದಲ್ಲಿ ಉಲ್ಲೇಖವಿರುವುದರಿಂದ ಇದು ಈ ಒಂದು ಕಾಲಾವಧಿಯಲ್ಲಿಯೇ ನಿರ್ಮಾಣವಾಗಿದೆ ಎಂದು ಹೇಳಬಹುದು.

**ಕಾಂತೆಬೆನ್ನೂರು ಕೆರೆ**

ಹೂವಿನಹಡಗಲಿ ತಾಲೂಕಿನ ಮತ್ತೊಂದು ಪ್ರಮುಖ ಗ್ರಾಮವಾದಂತ ಕಾಂತೆಬೆನ್ನೂರು ಒಂದು ಚಿಕ್ಕ ಕೆರೆಯನ್ನು ಹೊಂದಿದ್ದು, ಅದು ಊರಿನ ಮಧ್ಯದಲ್ಲಿ ದಕ್ಷಿಣಾಭಿಮುಖವಾಗಿ ಕಂಗೊಳಿಸುತ್ತಿರುವುದನ್ನು ಕಾಣಬಹುದು. ಇದು ಇಂದು ಸಣ್ಣ ಕೆರೆಯಾಗಿದ್ದು ಸಂಪೂರ್ಣವಾಗಿ ನೀರು ಮಲೀನವಾಗಿರುವುದನ್ನು ಕಾಣುತ್ತೇವೆ. ಈ ಕೆರೆಯು ೫ ಎಕರೆ ವಿಸ್ತೀರ್ಣವನ್ನು ಹೊಂದಿದ್ದು, ಏರಿಯ ಉದ್ದ ೫೦೦ ಮೀ. ಏರಿಯ ಎತ್ತರ ೭.೭೦ ಇದನ್ನು ನಿರ್ಮಿಸಲು ಬಿಳಿಯ ಕಲ್ಲಿನಿಂದ ಬಳಸಲ್ಪಟ್ಟಿದೆ. ಈ ಕೆರೆಯಲ್ಲಿ ನೀರು ನಿಂತಿದ್ದರೂ ಕೂಡ ಅದು ಸಂಪೂರ್ಣವಾಗಿ ಮಾಲಿನ್ಯ ಹೊಂದಿ ಜನರ ಉಪಯೋಗಕ್ಕೆ ಬಾರದಾಗಿದೆ. ಈ ಕೆರೆಯು ಊರಿನ ಮಧ್ಯ ರಚನೆಯಾಗಿದ್ದು, ಒಮದು ಕೋಡಿಯನ್ನು ಹೊಂದಿದೆ. ಆ ಕೋಡಿಯು ಸಹ ಸಂಪೂರ್ಣವಾಗಿ ನಾಶವಾಗಿರುವುದನ್ನು ಕಾಣಬಹುದಾಗಿದೆ. ಕೆರೆಯ ಬಗ್ಗೆ ಕ್ಷೇತ್ರಕಾರ್ಯದಲ್ಲಿ ಇದರ ಬಗ್ಗೆ ಮಾಹಿತಿಯನ್ನು ಪಡೆಯಲಾಗಿದೆ.

ಕಾಂತೆಬೆನ್ನೂರಿನ ಕೆರೆಯೆರಿ ಮೇಲಿರುವ ಆಕಳಕಲ್ಲಿನ ಶಾಸನ ಇದು ಹೆಚ್ಚು ತೃಟಿತವಾಗಿರುವುದರಿಂದ ವಿಷಯ ಅಸ್ಪಷ್ಟವಾಗುತ್ತದೆ. ಚಾಲುಕ್ಯರ ದೊರೆ ಜಗದೇಕಮಲ್ಲ ದೇವನ ಆಳ್ವಿಕೆಯನ್ನು ಉಲ್ಲೇಖಿಸಲಾಗಿದೆ. ಮೆಲಿನ ಶಾಸನದಂತೆ ಇಮ್ಮಡಿ ಜಯಸಿಂಹನ ಕಾಲದ್ದೆಂದು ವಿದ್ವಾಂಸರು ತೀರ್ಮಾನಿಸುತ್ತಾರೆ. ಇದು ಕೆರೆ ಎರಿಯ ಮೆಲೆ ನಿರ್ಮಿತವಾಗಿರುವುದರಿಂದ ಇದಕ್ಕೂ ಮೊದಲೇ ಈ ಕೆರೆಯನ್ನು ನಿರ್ಮಿಸಿರಬಹುದೆಂದು ಹೇಳಬಹುದಾಗಿದೆ.

ಈ ಕೆರೆಯು ಊರಿನ ಮಧ್ಯದಲ್ಲಿದ್ದು, ಇದು ಸಂಪೂರ್ಣವಾಗಿ ಮಲೀನವಾಗಿರುವುದನ್ನು ಕಾಣುತ್ತೇವೆ. ಇದು ಒಂದು ಸಣ್ಣ ಕೆರೆಯಾಗಿದೆ.

**ಮೈಲಾರ ಕೆರೆ**

ಹೂವಿನ ಹಡಗಲಿ ತಾಲೂಕಿನಿಂದ ೪೩ ಕಿ.ಮೀ ದೂರದಲ್ಲಿರುವ ಮೈಲಾರವು ಇತಿಹಾಸ ಪ್ರಸಿದ್ಧ ಸ್ಥಳವಾಗಿದೆ. ಇಲ್ಲಿ ವರ್ಷಕ್ಕೆ ಒಂದು ಬಾರಿ ಮೈಲಾರಲಿಂಗನ ಕಾರ್ಣಿಕೋತ್ಸವ ನಡೆಯುವುದನ್ನು ನಾವು ಕಾಣುತ್ತೇವೆ. ಈ ಕಾರ್ಣಿಕೋತ್ಸವದಲ್ಲಿ ಗೊರವಪ್ಪ ಏನು ಹೇಳುತ್ತಾನೋ ಅದರಂತೆಯೇ ನಡೆಯುತ್ತದೆ. ಎಂಬ ಪ್ರತೀತಿ ಇದೆ. ಮೈಲಾರದ ಮಧ್ಯದಲ್ಲಿ ಕೆರೆ ಇತ್ತು. ಆದರೆ ಈಗ ಅದು ಸಂಪೂರ್ಣವಾಗಿ ನಾಶವಾಗಿದ್ದು ಅಲ್ಲಿ ಸರಕಾರವು ಬೃಂದಾವನ ನಿರ್ಮಿಸಲು ಮುಂದಾಗಿದೆ. ಇದಕ್ಕೆ ಕರಿಆಲನ ಗುಂಡಿ ಕೆರೆ ಎಂದು ಹೆಸರು ಬರಲು ಕಾರಣ. ಈ ಕೆರೆಯು ಏರಿಯ ಮೇಲೆ ಆಲದ ಮರಪಿತ್ತು ಹಾಗಾಗಿ ಇದಕ್ಕೆ

ಕರಿಆಲನಗುಂಡಿ ಕೆರೆ ಎಂದು ಹೆಸರು ಂದಿರಬಹುದು. ಈ ಕೆರೆಯ ಪಕ್ಕದಲ್ಲಿ ಪೂರ್ವಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರ ದೇವಾಲಯ, ಬರಮದೇವರ ಗುಡಿ, ಗುಂಡೇಶ್ವರ ಗುಡಿ, ಶಿಬರಕಟ್ಟೆ(ಮೈಲಾರ ಲಿಂಗೇಶ್ವನ ಪ್ರತೀಕ) ಗಳು ಇವೆ. ಹಾಗಾಗಿ ಇಂದು ಇಲ್ಲಿಗೆ ಅನೇಕ ಪ್ರವಾಸಿಗರು, ಮೈಲಾರ ಲಿಂಗನ ಭಕ್ತರು ಬರುವುದರಿಂದ ಇಲ್ಲಿ ಬೃಂದಾವನ ನಿರ್ಮಿಸಲು ಸರ್ಕಾರ ಮುಂದಾಗಿದೆ.

ಸೋಮಲಿಂಗೇಶ್ವರ ದೇವಾಲಯದ ಬಳಿ ಇರುವ ಶಾಸನ : ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲ ದೇವರ ಕಾಲದ ಶಾಸನ "ತ್ರೈಲೋಕ್ಯನಾಥಾಯ" ಎಂಬ ಆರಂಭಿಕ ಶ್ಲೋಕ ಹೊಸ ಸಂಪ್ರದಾಯದಿಂದ ಕೂಡಿದೆ. ಸಮಸ್ತಲೋಕಗಳಿಗೂ ಆಶ್ರಯದಾತನೂ ಪೃಥ್ವಿವಲ್ಲಭನ ಕಾಲದ ಈ ಶಾಸನದಲ್ಲಿ ಮೂಲಸ್ಥಾನದ ದೇವರಿಗೆ ದೇವಾಲಯವನ್ನು ಸರ್ವ ಸಮಸ್ಯೆವಾಗಿ ಬೆಳವಳ್ಳದ ಪೂರ್ವದಿಕ್ಕಿನಲ್ಲಿ ಅಳೆದುಕೊಟ್ಟ ಹೊಲ ೨೪ ಮತ್ತರು ಅಲ್ಲಿಂದ ಪೂರ್ವಕ್ಕೆ "ಆಲಗೌಡನಕೆರೆ"ಯ ಕೆಳಗೆ ಗದ್ದೆ ಮತ್ತರಳೆದು ಕೊಟ್ಟ ೨ ಮತ್ತರು ಹೊಲವನ್ನು ಸರ್ವಬಾಧಾ ಪರಿಹಾರವೆಂದು ೨ ಮನೆ ೧ ಅಂಗಡಿ ಧಾರೆಯೆರೆದು ಕೊಟ್ಟರು. ಹೀಗೆ ಈ ಶಾಸನದಲ್ಲಿ ಕೆರೆಯ ಉಲ್ಲೇಖವಿರುವುದರಿಂದ ಈ ಮೊದಲೇ ಕೆರೆ ನಿರ್ಮಾಣವಾಗಿತ್ತು ಎಂದು ಹೇಳಬಹುದು.

**ಹೊಳಲು ಕೆರೆ**

ಹೂವಿನ ಹಡಗಲಿ ತಾಲೂಕಿನ ಒಂದು ಬಹುಪ್ರಮುಖ ಗ್ರಾವಾದಂತ ಹೊಳಲು ದೇವಾಲಯಗಳಿಂದ ಕೂಡಿದೆ. ಇಲ್ಲಿಯ ಅನಂತಶಯನ ಗುಡಿಯ ಬಳಿ ಇರುವ ಶಾಸನದಲ್ಲಿ ಕೆರೆಯ ಉಲ್ಲೇಖವಿದ್ದು, ಈ ಕೆರೆಯು ಇಂದು ಸಂಪೂರ್ಣವಾಗಿ ತೋಟ ಗದ್ದೆಗಳಾಗಿ ಮಾರ್ಪಾಡಾಗಿರುವುದನ್ನು ನಾವು ಕಾಣುತ್ತೇವೆ. ಹೊಳಲು ಗ್ರಾಮದಲ್ಲಿ "ಗಂಡಿಕೆರೆ" ಎಂಬ ಕೆರೆಯು ಊರಿಂದ ಪಶ್ಚಿಮಕ್ಕೆ ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡಿತ್ತು. ಆದರೆ ಇಂದು ಅದು ಸಂಪೂರ್ಣವಾಗಿ ಕಬ್ಬಿನ ಗದ್ದೆಯಾಗಿ ಮಾರ್ಪಾಡಾಗಿರುವುದನ್ನು ಕಾಣಬಹುದಾಗಿದೆ.

ಅನಂತಶಯನ ಬಳಿ ಇರುವ ಶಾಸನ "ಶ್ರೀ ಗಣಪತ್ಯಾಯ ನಮಃ" ಎಂದು ಆರಂಭವಾಗುವ ಈ ಶಾಸನ ಪಾಂಡ್ಯದೇವನ ಆಳ್ವಿಕೆಯ ಕಾಲದ್ದು, ಅವನು ನೊಳಂಬವಾಡಿ ೩೨೦೦೦ನ್ನು ಆಳುತ್ತಿದ್ದ. ಶ್ರೀಮುಖ ಸಂವತ್ಸರ ಉತ್ತರಾಯಣ ಸಂಕ್ರಮದಲ್ಲಿ ಶಂಕರಭಟ್ಟರು ಅವರ ಮಗನೂ ೫೦ ಕಂಬದ ತೋಟವನ್ನು ಬಿಟ್ಟ ಗದ್ದೆ ೨ ಮತ್ತರು ಹೊಲವನ್ನು ಬಿಟ್ಟರು. ಆ ಊರಿನ ಕ್ರಬಿಂತ ರಾಳ್ಕಾಡಭಟ್ಟರು ಮತ್ತು ಅವರ ಮಗ ನಾಳಭಟ್ಟನು ಗಂಡಿಗೆರೆ ಯಲ್ಲಿನ ಚಿರಾಹಿಸಹಿತ ೧ ಮತ್ತರು ಭೂಮಿಯನ್ನು ಬಿಟ್ಟರು. ಹಾಗಾಗಿ ಈ ಶಾಸನಕ್ಕೆ ಕೆತ್ತಿರುವುದಕ್ಕಿಂತ ಪೂರ್ವದಲ್ಲಿ ಗಂಡಿಗೆರೆ ನಿರ್ಮಾಣವಾಗಿತ್ತು ಎಂದು ಹೇಳಬಹುದು.

**ಕುರುವತ್ತಿ ಕೆರೆ**

ಕುರುವತ್ತಿಯ ಇತಿಹಾಸ ಪ್ರಸಿದ್ಧ ಸ್ಥಳವಾಗಿದ್ದು, ಇಲ್ಲಿ ಪ್ರಾಚೀನ ಕಾಲದ ಮಲ್ಲಿಕಾರ್ಜುನ ದೇವಾಲಯವು, ತುಂಗಭದ್ರ ನದಿ ದಂಡೆಗೆ ನಿರ್ಮಿಸಲಾಗಿದೆ. ಈ ದೇವಾಲಯದಲ್ಲಿ ಕುರುವತ್ತಿಯ ಕೆರೆಯ ಬಗ್ಗೆ ಉಲ್ಲೇಖ ಇರುವುದನ್ನು ನಾವು ಕಾಣುತ್ತೇವೆ. ಈ ಕೆರೆಯು ಇಂದು ಸಂಪೂರ್ಣವಾಗಿ ಜಾಲಿಮುಳ್ಳಿನ ಗಿಡಗಳಿಂದ ಆವೃತವಾಗಿದ್ದು, ಇದು ಒಂದು ಕೋಡಿಯನ್ನು ಹೊಂದಿದೆ. ಏರಿಯು ಕಾಣುವಂತಿಲ್ಲ ಇದು ಇಂದು ಸಂಪೂರ್ಣವಾಗಿ ಅವನತಿಯ ಅಂಚಿನಲ್ಲಿರುವಂತ ಕೆರೆ ಎಂದರೆ ತಪ್ಪಾಗಲಾರದು.

ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದಲ್ಲಿ ನಿಲ್ಲಿಸಿರುವ ಶಾಸನ ಇದು. ವಿಶಿಷ್ಟ ಪೂರ್ಣವಾಗಿದೆ. ಇದರ ಕಾಲ ೩-೩-೧೧೦೪ ಚಾಲುಕ್ಯರ ತ್ರಿಭುವನ ಮಲ್ಲನ ಆಳ್ವಿಕೆಯ ಕಾಲದ್ದು, ಇದರಲ್ಲಿ ಕೆರೆಯ ಜೀರ್ಣೋದ್ಧಾರದ ಉಲ್ಲೇಖವಿದೆ. ಅವರು ಅರ್ಪಿಸಿದ ಹೊಲ ೨೬ ಮತ್ತರು ಭೂಮಿ ಅದರ ಚೆಕ್ಕುಬಂದಿಯನ್ನು ಹೇಳಲಾಗಿದೆ. ಶಾಸನ ಅತ್ಯಂತ ಚಿಕ್ಕದಾಗಿದ್ದು ಕೇವಲ ೧೦ ಸಾಲುಗಳ ದಾನ ಶಾಸನ. ಉಳಿದಂತೆ ಹೆಚ್ಚಿನ ಮಾಹಿತಿ ಇಲ್ಲ. ಇಲ್ಲಿ ಬಂದಿರುವ ಕೆರೆಯ ಜೀರ್ಣೋದ್ಧಾರ ಹೊಸತು. ಹಾಗಾಗಿ ಕುರುವತ್ತಿಯ ಕೆರೆಯ ಕಲ್ಯಾಣ ಚಾಲುಕ್ಯರ ಕಾಲದೆಂದು ಊಹಿಸಬಹುದಾಗಿದೆ.

ಇದು ಇಂದು ಸಂಪೂರ್ಣವಾಗಿ ಸಿಕ್ಕ ಜಾಲಿ ಮುಳ್ಳಿನ ಗಿಡಗಳಿಂದ ಆವೃತವಾಗಿ, ಇದು ಒಂದು ಅವನತಿಯ ಅಂಚಿನಲ್ಲಿರುವ ಕೆರೆ ಎಂದರೆ ತಪ್ಪಾಗಲಾರದು.

**ಹಿರೇಮಲ್ಲನಕೆರೆ ಕೆರೆ**

ತಾಲೂಕು ಕೇಂದ್ರದಿಂದ ೧೦ ಕಿ. ಮೀ ದೂರದಲ್ಲಿರುವ ಹಿರೇಮಲ್ಲನ ಕೆರೆಯು ಒಂದು ಪ್ರಮುಖ ಕೆರೆಯಾಗಿರುವುದನ್ನು ನಾವು ಕಾಣುತ್ತೇವೆ. ತುಂಗಭದ್ರಾ ಆಣೆಕಟ್ಟಿನ ನಿರ್ಮಾಣಕ್ಕಿಂತ ಮೊದಲು ಹಿನ್ನಿರಿನಲ್ಲಿ ಮುಳುಗಡೆಯಾದ ಮಲ್ಲಾಪುರ ತಾಲೂಕು ಅನೇಕ ಚಾರಿತ್ರಿಕ ಘಟನೆಗಳಿಗೆ ಸಾಕ್ಷಿಯಾಗಿ ಗತಿಸಿಹೋಗಿದೆ. ಅಂದು ಅಚ್ಚುಕಟ್ಟಿನ ಪ್ರದೇಶದಲ್ಲಿ ಮುಳುಗಡೆಯಾದ ಅನೇಕ ಹಳ್ಳಿಗಳಿಗೆ ಸರ್ಕಾರ ಪುನರ್ ವಸತಿ ಕಲ್ಪಿಸಿ ಹೊಸ-ಹೊಸ ಹಳ್ಳಿಗಳು ನಿರ್ಮಾಣಗೊಂಡವು. ಒಡೆಯರ ಕಾಲದಲ್ಲಿ ನಿರ್ಮಾಣವಾಗಿದ್ದ(ಗೆಜೆಟಿಯರ್‌ನಲ್ಲಿ) ಕೆರೆಗಳ ಬಗ್ಗೆ ಸರ್ಕಾರ ರಾಜ್ಯಪತ್ರದಲ್ಲಿ ನಮೂದಿಸಿದಂತೆ ಇಂದಿನ ಹೂವಿನ ಹಡಗಲಿ ತಾಲೂಕಿನ ಹಿರೇಮಲ್ಲನ ಕೆರೆ ಎಂಬ ಊರು ಮುಳುಗಡೆಯಾದ ಅನೇಕ ಗ್ರಾಮಗಳಿಂದ ಒಂದು ಸಮೃದ್ಧಗೊಂಡ ಊರು.

ಇಂತಹ ಊರಿನಲ್ಲಿ ಹಿರಿಯ ಮಲ್ಲಪ್ಪ-ಕಿರಿಯ ಮಲ್ಲಪ್ಪನೆಂಬ ದೇವರಾದ ಮಲ್ಲಿಕಾರ್ಜುನನ ಹೆಸರಿನ ನಾಮಾಂಕಿತ ಬಹಳ ಜನ ಇರುವ ಈ ಊರಿನಲ್ಲಿ ಸಹೋದರರಿಬ್ಬರಿದ್ದರು. ಅಂತಹ ಸಹೋದರರಲ್ಲಿ ಹಿರಿಯ ಮಲ್ಲಪ್ಪ ನಾಡಿನ ಒಳಿತಿಗಾಗಿ ತನ್ನೂರಿನ ಜನರ ಕ್ಷೇಮ-ಕೃಷಿಗಾಗಿ ಸುಮಾರು ೪೦೦ ಎಕರೆಯಲ್ಲಿ ಕೆರೆಯನ್ನು ಕಟ್ಟಿಸಿದ್ದು ದಾಖಲೆ. ಈ ಕೆರೆಯು ಊರಿಂದ ಪೂರ್ವಕ್ಕೆ ನಿರ್ಮಾಣವಾಗಿದ್ದು, ಉತ್ತರಾಭಿಮುಖವಾಗಿ ಸುಮಾರು ೧೪೦೦ ಮೀ. ಏರಿಯ ಉದ್ದ. ಹಾಗೂ ೩.೬೦ ಮೀ. ಎತ್ತರ ಹೊಂದಿದ್ದು, ಒಂದು ಕೋಡಿ ಹಾಗೂ ತೂಬನ್ನು ಹೊಂದಿದೆ. ಇಂದು ಇದು ಸಿಕ್ಕ ಜಾಲಿ ಮುಳ್ಳಿನಿಂದ ಆವೃತ್ತವಾಗಿದ್ದು, ಕೆರೆಯಲ್ಲಿ ನೀರು ಶೇಖರಣೆಯಾಗಬೇಕೆಂದಾದರೆ ಹೂಳೆತ್ತುವ ಕಾರ್ಯ ನಡೆಯಬೇಕಾಗಿದೆ. ಇದಕ್ಕೆ ತುಂಗಭದ್ರಾ ನದಿಯಿಂದ ನೀರನ್ನು ತುಂಬಿಸಿದರೆ ಕೇವಲ ೪-೫ ತಿಂಗಳು ಮಾತ್ರ ನಿಲ್ಲುತ್ತದೆ. ಹಾಗಾಗಿ ಇಂದು ಹೂಳೆತ್ತುವ ಕಾರ್ಯ ನಡೆಯದಿರುವುದು ತುಂಬಾ ಶೋಚನೀಯವಾದ ಸಂಗತಿಯಾಗಿದೆ.

ಈ ಕೆರೆಗೆ ಜನ ಹಿರಿಯ ಮಲ್ಲನಕೆರೆ, ಹಿರಿಯ ಮಲ್ಲನಕೆರೆ ಹೀಗೆ ಸಾಗಿ ಬಂದ ಶಾಬ್ದಿಕ ಉಚ್ಚಾರ ಮಾಡಿ ಇಂದು ಅದು ಹಿರೇಮಲ್ಲನಕೇರಿ ಎಂದು ಜನರಾಡುವ ಗ್ರಾಮೀಣ ಭಾಷೆಯಲ್ಲಿ ಉಳಿದಿದೆ. ಆದರೆ ಅದು ನಿಜವಾಗಿಯೂ ಹಿರೇಮಲ್ಲನಕೆರೆ ಎಂಬುದಾಗಿ ಈ ಜನರಿಗೆ ತಿಳಿಸಿದ್ದು ಶಂಕರ ಬೆಟಗೇರಿ ಇವರು ಹಿರೇಮಲ್ಲನ ಕೆರೆಗೆ ಶಿಕ್ಷಕರಾಗಿ ಬಂದು ಆ ಊರಿನ ಇತಿಹಾಸ ತಿಳಿದುಕೊಂಡು ಅದಕ್ಕೆ ಹಿರೇಮಲ್ಲನ ಕೆರೆ ಎಂದು ತಿಳಿಸಿದರು. ಅಂದಿನಿಂದ ಈಗ ಅದು ಬದಲಾಗಿ ಹಿರೇಮಲ್ಲನಕೆರೆ ಎಂದು ಆಗಿರುವುದನ್ನು ನಾವು ಕಾಣುತ್ತೇವೆ.

**ದೇವಗೊಂಡನಹಳ್ಳಿ ಕೆರೆ**

ಇದು ಹೂವಿನ ಹಡಗಲಿಯಿಂದ ೮ ಕಿ. ಮೀ ದೂರದಲ್ಲಿದ್ದು, ಇದು ಊರಿನಿಂದ ೧.೫ ಮೀ ದೂರದಲ್ಲಿದೆ. ಇದು ಹಳೆಯ ಕೆರೆಯಾಗಿದ್ದು ೧೯೨ ಎಕರೆ ವಿಸ್ತೀರ್ಣ ಹೊಂದಿದ್ದು, ಯೇಚಿತ ಅಚ್ಚುಕಟ್ಟಾದ ಪ್ರದೇಶ ೨೨ ಎಕರೆ ಏರಿಯ ಉದ್ದ ೧೦೦೬ ಮೀ. ಏರಿಯ ಎತ್ತರ ೭. ೨೦. ಎಡಕಾಲುವೇ ೧. ಕಿ.ಮೀ ಬಲಕಾಲುವೆ ಕಿ. ಮೀ ಹೊಂದಿದೆ. ನೀರಿನ ಸಂಗ್ರಹಣಾ ಸಾಮರ್ಥ್ಯ ೬೪.೭೦ ಕಿ. ಮೀ ಕೋಡಿಯ ಮಾದರಿ ನ್ಯಾಚುರಲ್ ಗ್ರಾಂಡ್ ಎರಡು ತೂಬುಗಳನ್ನು ಹೊಂದಿದ್ದು ಪ್ಲೆಗ್ ಮತ್ತು ರಾಡ್ ಟೈಪ್. ಕೆರೆಯ ಎರಿಗೆ ಬಿಳಿ ಕಲ್ಲನ್ನು ಬಳಸಿ ನಿರ್ಮಿಸಲಾಗಿದೆ. ಕೆರೆಯು ಒಂದು ಉತ್ತಮ ಸ್ಥಿತಿಯಲ್ಲಿದ್ದು. ಅಲ್ಲಿನ ರೈತರಿಗೆ ತುಂಬಾನೆ ಸಹಾಯಕಾರಿಯಾಗಿರುವುದನ್ನು ಕಾಣುತ್ತೇವೆ. ಈ ಕೆರೆಗೆ ತುಂಗಭದ್ರಾ ನದಿಯಿಂದ ನೀರು ತರುವಂತಹ ಕಾರ್ಯ ಯಶಸ್ವಿಯಾಗಿ ಕೆರೆಯಲ್ಲಿ ವರ್ಷಪೂರ್ತಿ ನೀರು ನಿಲ್ಲುವಂತೆ ಮಾಡಲಾಗಿದೆ. ಈ ಕೆರೆಯ ಸಂಪೂರ್ಣ ಅಭಿವೃದ್ಧಿಯನ್ನು ಸಣ್ಣ ನೀರಾವರಿ ಇಲಾಖೆ

ನೋಡಿಕೊಳ್ಳುತ್ತಿರುವುದನ್ನು ನಾವು ಕಾಣುತ್ತೇವೆ. ಇದು ಅತ್ಯಂತ ಹಳೆಯ ಕೆರೆಯಾಗಿದ್ದು ಇದರ ಬಗ್ಗೆ ಯಾವುದೇ ಶಾಸನಗಳಲ್ಲಿ ಉಲ್ಲೇಖವಾಗಿರುವುದಿಲ್ಲ.

**ತಳಕಲ್ಲು ಕೆರೆ**

ತಳಕಲ್ಲು ಹೂವಿನ ಹಡಗಲಿಯಿಂದ ೧೪ ಕಿ.ಮೀ ದೂರದಲ್ಲಿದ್ದು, ತಳಕಲ್ ಕೆರೆಯು ಊರಿಂದ ಪೂರ್ವಕ್ಕೆ ನಿರ್ಮಾಣವಾಗಿದ್ದು, ಈ ಕೆರೆಯು ಉತ್ತರಾಭಿಮುಖವಾಗಿರುವುದನ್ನು ಕಾಣಬಹುದು. ಕೆರೆಯು ೬೯೦ ಏಕರೆ ವಿಸ್ತೀರ್ಣ ಹೊಂದಿದ್ದು, ಏರಿಯ ಉದ್ದ ೧೨೦೦ ಮೀ, ಏರಿಯ ಎತ್ತರ ೪.೦೨ ಮೀ. ಎಡ ಕಾಲುವೆ ೩.೪೯ ಕಿ ಮೀ. ಬಲಕಾಲುವೆ ೦.೮೦ ಕಿ.ಮೀ ಇವೆ. ಕೆರೆಯು ಯೋಜಿತ ಅಚ್ಚುಕಟ್ಟು ಪ್ರದೇಶ ೨೭೬ ಹೆಕ್ಟರ್ ಒಂದು ಕೋಡಿಯನ್ನು ಹೊಂದಿದ್ದು ಪ್ರೀಪವರ್ ಫಾಲ್ ಆಗಿರುವುದನ್ನು ನಾವು ಕಾಣುತ್ತೇವೆ. ಪ್ಲೇಗ್ ಆ್ಯಂಡ್ ರಾಡ್ ಟ್ರೈಪ್ ಮಾದರಿಯವಾಗಿವೆ. ಈ ಕೆರೆಯು ಅತ್ಯಂತ ಹಳೆಯ ಕಾಲದ ಕೆರೆಯಾಗಿದ್ದು. ಲೋಕೋಪಯೋಗಿ ಇಲಾಖೆಯು ೧೯೮೩ ರಲ್ಲಿ ಜೀರ್ಣೋದ್ದಾರವನ್ನು ಮಾಡಿದೆ. ಇಷ್ಟೊಂದು ದೊಡ್ಡ ಕೆರೆಯಾಗಿದ್ದರು ಕೂಡ ಇಲ್ಲಿ ನೀರಿನ ವ್ಯವಸ್ಥೆಯನ್ನು ಕಾಣುತ್ತೇವೆ. ಇಲ್ಲಿ ಯಾವುದೇ ಶಾಸನಾತ್ಮಕ ಮಾಹಿತಿ ಲಭ್ಯವಾಗದ ಕಾರಣ ಊರಿನ ಹಿರಿಯರ ಬಾಯಿಂದ ಮಾಹಿತಿ ಪಡೆದುಕೊಳ್ಳಲಾಗಿದೆ.

**ಸೋವಿನಹಳ್ಳಿ ಕೆರೆ**

ಹೂವಿನ ಹಡಗಲಿ ತಾಲೂಕಿನ ಒಂದು ಪ್ರಮುಖ ಗ್ರಾಮವಾದ ಸೋಮನಹಳ್ಳಿಯ ಪರಿಸರದಲ್ಲಿ ಕೆರೆಯು ನಿರ್ಮಾಣವಾಗಿದ್ದು ಅದು ಇಂದು ಸ್ವಲ್ಪ ಹಾಳಾಗಿರುವುದನ್ನು ನಾವು ಕಾಣುತ್ತೇವೆ. ಇದು ೧೭೩ ಎಕರೆ ವಿಸ್ತೀರ್ಣವನ್ನು ಹೊಂದಿದ್ದು, ಏರಿಯ ಉದ್ದ ೫೧೦ ಮೀ. ಉದ್ದ ಹೊಂದಿದೆ. ಏರಿಯ ಎತ್ತರ ೪.೪೦ ಮೀ. ಹೊಂದಿದೆ. ಕಪ್ಪು ಮತ್ತು ಬಿಳಿಯ ಕಲ್ಲಿನಿಂದ ನಿರ್ಮಿಸಲಾಗಿದೆ. ಇದು ಹಳೆಯ ಕಾಲದ ಕೆರೆಯಾಗಿದ್ದು ಯಾವುದೇ ದಾಖಲೆಗಳು ಲಭ್ಯವಿಲ್ಲದ ಕಾರಣ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪಡೆದ ಮಾಹಿತಿಯ ಆಧಾರದ ಮೇಲೆ ಇದರ ಬಗ್ಗೆ ಬರೆಯಲಾಗಿದೆ. ಈ ಕೆರೆಯನ್ನು ಲೋಕೋಪಯೋಗಿ ಇಲಾಖೆಯು ೧೯೮೦ ರಲ್ಲಿ ಜೀರ್ಣೋದ್ದಾರವನ್ನು ಮಾಡಿ ಅದನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ನಿರ್ಮಿಸಿರುವುದನ್ನು ನಾವು ಕಾಣುತ್ತೇವೆ. ಈ ಕೆರೆಯು ಒಂದು ಕೋಡಿಯನ್ನು ಹೊಂದಿದ್ದು, ಪ್ರೀಓವರ್ ಟ್ರೈಪ್ ಗೇಟ್‌ಗಳನ್ನು ಕಿತ್ತಿರುತ್ತಾರೆ ಈ ಕೆರೆಯಲ್ಲಿ ವರ್ಷಪೂರ್ತಿ ಸ್ವಲ್ಪ ನೀರಾದರು ಸಂಗ್ರಹವಾಗಿರುತ್ತದೆ.

**ದಾಸನಹಳ್ಳಿ ಕೆರೆ**

ದಾಸನಹಳ್ಳಿ ಹೂವಿನ ಹಡಗಲಿ ತಾಲೂಕಿನಲ್ಲಿ ಒಂದು ಪ್ರಮುಖ ಗ್ರಾಮವಾಗಿದ್ದು, ಇದು ದಾಸನಹಳ್ಳಿಯ ಪರಿಸರದಲ್ಲಿ ಒಂದು ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಇದು ೨೧೪ ಎಕರೆ

ವಿಸ್ತೀರ್ಣ ಹೊಂದಿದ್ದು, ೨೮೯ ಹೆಕ್ಟರ್ ಇದರ ಏರಿಯ ಉದ್ದ ೭೮೦ ಮೀ. ಏರಿಯ ಎತ್ತರ ೧೧.೮೩ ಮೀ. ಇದೆ. ಎಡಕಾಲುವೆ ೧ ಕಿ.ಮೀ ಮತ್ತು ಬಲಕಾಲುವೆ ೫.೨೫ ಕಿ. ಮೀ. ಇವೆ. ಕೋಡಿಯ ಮಾದರಿ ಫ್ರೀಓವರ್ಸ್ ಫಾಲ್ ತೂಬುಗಳು ಮಾದರಿ 'ಪ್ಲಗ್ ಮತ್ತು ರಾಡ್ ಟೈಪ್' ಕೆರೆಯು ಪ್ರಾಚೀನ ಕಾಲದ ಕೆರೆಯಾಗಿದ್ದು, ಇದನ್ನು ಲೋಕೋಪಯೋಗಿ ಇಲಾಖೆಯು ೧೬೮೬ ರಲ್ಲಿ ಜೀರ್ಣೋದ್ದಾರವನ್ನು ಮಾಡಿದೆ. ಈ ಕೆರೆಯು ಒಂದು ವಿಶಾಲವಾದ ಕೆರೆಯಾಗಿದ್ದು, ಇಲ್ಲಿ ಏರಿಯ ನಿರ್ಮಾಣದಲ್ಲಿ ಕಪ್ಪು ಮತ್ತು ಬಿಳಿಯ ಕಲ್ಲಿನಿಂದ ನಿರ್ಮಿಸಿರುವುದನ್ನು ನಾವು ಕಾಣುತ್ತೇವೆ. ಈ ಕೆರೆಯು ಊರಿನಿಂದ ಸುಮಾರು ೧.ಕಿ. ಮೀ. ದೂರದಲ್ಲಿ ನಿರ್ಮಾಣವಾಗಿದೆ. ಇದು ಉತ್ತರಾಭಿಮುಖವಾಗಿ ರಚನೆಯಾಗಿರುವುದನ್ನು ಕಾಣಬಹುದು. ಇಲ್ಲಿ ಯಾವುದೇ ದಾಖಲೆಗಳು ಸಿಗದ ಕಾರಣ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿ ಪಡೆಯಲಾಗಿದೆ.

**ಅರಳಿಹಳ್ಳಿ ಕೆರೆ**

ಹೂವಿನ ಹಡಗಲಿ ತಾಲೂಕಿನ ಒಂದು ಪ್ರಮುಖ ಗ್ರಾಮವಾಗಿರುವ ಅರಳಿಹಳ್ಳಿಯ ಪರಿಸರದಲ್ಲಿಯು ಒಂದು ಬಹುದೊಡ್ಡಕೆರೆ, ಅಂದರೆ ನಮ್ಮ ಹಡಗಲಿ ತಾಲೂಕಿನಲ್ಲಿಯೇ ಒಂದು ದೊಡ್ಡ ಕೆರೆಯಾಗಿರುವುದನ್ನು ಕಾಣಬಹುದು. ಇದು ೧೯೦೦ ಎಕರೆ ವಿಸ್ತೀರ್ಣವನ್ನು ಹೊಂದಿದ್ದು, ೭೬೯ ಹೆಕ್ಟರ್ ಯೋಜಿತ ಅಚ್ಚುಕಟ್ಟು ಪ್ರದೇಶವನ್ನು ಹೊಂದಿದೆ. ಇದರ ಏರಿಯ ಉದ್ದ ೧೯೨೦ ಮೀ ಇದ್ದು, ಏರಿಯ ಎತ್ತರ ೯.೮೬ ಆಗಿದೆ. ಎಡಕಾಲುವೆ ೬.೬೦ ಕಿ ಮೀ. ಹೊಂದಿದ್ದರೆ ಬಲಕಾಲುವೆ ೭.೪೪ ಕಿ. ಮೀ ಹೊಂದಿದೆ. ಕೋಡಿಯ ಮಾದರಿ ಫ್ರೀಓವರ್ ಫಾಲ್ ತೂಬುಗಳ ಮಾದರಿ ಷಟರ್ ಟೈಪ್ ಹೀಗೆ ಈ ಕೆರೆಯು ಪ್ರಾಚೀನವಾದ ಕೆರೆಯಾಗಿದ್ದು, ಲೋಕೋಪಯೋಗಿ ಇಲಾಖೆಯವರು ಇದನ್ನು ೧೯೮೩ ರಲ್ಲಿ ಪುನಃ ಜೀರ್ಣೋದ್ಧಾರ ಮಾಡಿರುವುದನ್ನು ನಾವು ಕಾಣುತ್ತೇವೆ. ಕೆರೆಗೆ ಯಾವುದೇ ರಿತಿಯ ದಾಖಲಾತಿಗಳು ಕಂಡುಬರುವುದೆಲ್ಲವಾದ್ದರಿಂದ ಕ್ಷೇತ್ರಕಾರ್ಯದ ವರದಿಯ ಮೇಲೆ ಮಾಹಿತಿ ಸಂಗ್ರಹಿಸಲಾಗಿದೆ.

**ನಾಗತಿಬಸಾಪುರ ಕೆರೆ**

ಹೂವಿನ ಹಡಗಲಿ ತಾಲೂಕಿನ ಒಂದು ಪ್ರಮುಖ ಗ್ರಾಮವಾಗಿರುವ ನಾಗತಿಬಸಾಪುರವು ಒಂದು. ಈ ಗ್ರಾಮಕ್ಕೆ ನಾಗತಿಬಸಾಪುರ ಎಂದು ಹೆಸರು ಬರಲು ಕಾರಣ ಹರಪ್ಪನ ಹಳ್ಳಿಯ ಪಾಳೇಗಾರ ಸೋಮಶೇಖರ ನಾಯಕನ ಹೆಂಡತಿಯಾದ ಬಸಮ್ಮನಾಗತಿ ಎಂದಿತ್ತು ಈ ಊರನ್ನು ಸೋಮಶೇಖರ ನಾಯಕ ಆಳುತ್ತಿದ್ದರಿಂದ ಅವನ ಹೆಂಡತಿಯ ಹೆಸರೇ ಈ ಊರಿಗೆ ಬಂದಿರಬಹುದು. ಈ ಕೆರೆಯು ೨೪೬ ಎಕರೆ ವಿಸ್ತೀರ್ಣ ಹೊಂದಿದ್ದು, ಅಚ್ಚುಕಟ್ಟಾದ ಯೋಜಿತ ಪ್ರದೇಶ ೧೦೦ ಹೆಕ್ಟರ್. ಏರಿಯ ಉದ್ದ

೫೫೩ ಮೀ. ಏರಿಯ ಎತ್ತರ ೧೦.೨೫ ಮೀ. ಬಲಕಾಲುವೆ ೧.೬೫ ಕಿ. ಮೀ ಉದ್ದವಾಗಿದೆ. ಈ ಕೆರೆಯನ್ನು ಲೋಕೋಪಯೋಗಿ ಇಲಾಖೆಯವರು ೧೯೮೩ ರಲ್ಲಿ ಜೀರ್ಣೋದ್ಧಾರ ಮಾಡಿದ್ದಾರೆ. ಈ ಕೆರೆಗೆ ತುಂಗಭದ್ರ ನದಿಯಿಂದ ಕೊಳವೆ ಪ್ರೈಪ್ ಮುಖಾಂತರ ನೀರನ್ನು ತರುವಂತ ಕಾರ್ಯ ಮಡಿದ್ದಾರೆ. ಇದು ಊರಿಂದ ೧. (೧/೨) ಕಿ. ಮೀ ಹೊಂದಿದ್ದು, ಇದನ್ನು ಸಂಪೂರ್ಣವಾಗಿ ಸ್ವಚ್ಛಗೊಳಿಸುವಂತ ಕಾರ್ಯ ಮಾಡಬೇಕಾಗಿದೆ. ಇಲ್ಲಿಯೂ ಯಾವುದೇ ರೀತಿಯ ದಾಖಲೆಗಳು ದೊರೆತಿಲ್ಲ.

**ಕೆರೆಗಳ ನಿರ್ಮಾಣ**

ಪ್ರಸ್ತುತ ಹೂವಿನ ಹಡಗಲಿ ತಾಲೂಕಿನ ಕೆರೆಗಳ ಅಧ್ಯಯನದ ಕುರಿತು ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಹೂವಿನ ಹಡಗಲಿ ಪರಿಸರದಲ್ಲಿರುವ ಕೆಲವು ಕೆರೆಗಳ ನಿರ್ಮಾಣದ ಬಗ್ಗೆ ತಿಳಿದು ಬಂದ ಮಾಹಿತಿ ಪ್ರಕಾರ ಕೆರೆಯನ್ನು ಯಾವುದಕ್ಕಾಗಿ ನಿರ್ಮಿಸುತ್ತಿದ್ದರು, ಯಾವ ಸ್ಥಳದಲ್ಲಿ ಅವುಗಳ ರಚನೆ ಮಾಡುತ್ತಿದ್ದರು, ಯಾವುದುಕೋಸ್ಕರ ನಿರ್ಮಾಣ ಮಾಡುತ್ತಿದ್ದರು ಎಂಬುದರ ಬಗ್ಗೆ ತಿಳಿದುಕೊಳ್ಳಬಹುದು. ಪ್ರಾಚೀನ ಕಾಲದಲ್ಲಿ ಕೆರೆಯನ್ನು ಬೆಟ್ಟ-ಗುಡ್ಡಗಳ ಇಳಿಜಾರು ಪ್ರದೇಶಗಳಲ್ಲಿ ಕೆರೆಯನ್ನು ಆ ಪ್ರದೇಶದ ಜನರ ಬಳಕೆಗೋಸ್ಕರ ಹಾಗೂ ಪ್ರಾಣಿ-ಪಕ್ಷಿಗಳಿಗೂ ಸಹಿತ ಕೆರೆಯ ನೀರು ಉಪಯೋಗವಾಗಲೆಂದು ಅವುಗಳನ್ನು ಅಲ್ಲಿ ನಿರ್ಮಿಸುತ್ತಿದ್ದರು. ಪ್ರಾಚೀನ ಕಾಲದ ಹಿರಿಯರು ಜನರಿಗೆ ಉಪಯೋಗವಾಗಲೆಂದು ಒಂದು ಒಳ್ಳೆಯ ಕಾರ್ಯವನ್ನು ಮಾಡೋಣವೆಂದು ಇಂತಹ ಒಂದು ಕಾರ್ಯವನ್ನು ಮಾಡುತ್ತಿದ್ದರು. ಉದಾ; ಹೂವಿನ ಹಡಗಲಿ ಪರಿಸರದಲ್ಲಿ ಹಗರನೂರು ಕೆರೆ ಹಾಗೂ ದೇವಾಗೊಂಡನಹಳ್ಳಿ ಕೆರೆ ಪ್ರಸ್ತುತದಲ್ಲಿ ಬಳಕೆಯಲ್ಲಿರುವ ಕೆರೆಗಳಾಗಿವೆ. ಈ ಕೆರೆಗಳು ತಲೆ ತಲೆಮಾರಿನವರಿಗೆ ಅನುಕೂಲವಾಗಲೆಂದು ಇಂತಹ ಕಾರ್ಯವನ್ನು ಮಾಡುತ್ತಿದ್ದರು.

ಪ್ರಾಚೀನ ಕಾಲದಲ್ಲಿ ಇಂತಹ ಕೆರೆಗಳನ್ನು ರಾಜರು, ಅಧಿಕಾರಿಗಳು, ಊರಿನ ಮುಖಂಡರು ಇಂತಹ ಕಾರ್ಯವನ್ನು ರೈತರ ಸಲಹೆ ಮೇರೆಗೆ ದೊಡ್ಡದಾದ ಹಾಗೂ ಚಿಕ್ಕ ಕೆರೆಗಳನ್ನು ನಿರ್ಮಿಸುತ್ತಿದ್ದರು. ಇವರ ಬಗ್ಗೆ ಶಾಸನದಲ್ಲಿ ತಿಳಿದುಕೊಳ್ಳಬಹುದಾಗಿದೆ. ಈ ಕೆರೆಗೆ ಹೊಂದಿಕೊಂಡಂತೆ ಅದರ ಅಂಗಳದಲ್ಲಿ ಕೋಡಿಗಳನ್ನು ನಿರ್ಮಿಸುತ್ತಿದ್ದರು ಎಂದು ತಿಳಿದುಬರುತ್ತದೆ.

ಕರ್ನಾಟಕದಲ್ಲಿ ಇಂತಹ ಅನೇಕ ಕೆರೆಗಳನ್ನು ನೋಡಬಹುದು ಅದರಲ್ಲಿ ಪ್ರಮುಖವಾಗಿ ವೈಶ್ಯರ ಕೆರೆ ಕೂಡ ಕಂಡುಬಂದಿವೆ. ಉದಾಹರಣೆಗೆ: ಸುಳೆ ಕೆರೆ, ಆಂಧ್ರಪ್ರದೇಶದ ಸಾನಿ ಎಂಬ ಕೆರೆ. ರಾಜರು ನಿರ್ಮಿಸಿದ ಕೆರೆ, ರೈತರು ನಿರ್ಮಿಸಿದ ಕೆರೆ ಹೀಗೆ ಈ ತಾಲೂಕಿನಲ್ಲಿ ಇಂತಹ ಕೆರೆಗಳು ಕಂಡುಬಂದಿವೆ.

ಅದರಲ್ಲಿ ಪ್ರಮುಖ ಕೆರೆಯು ಅತ್ಯಂತ ಬಹಳ ವಿಸ್ತಾರವಾದ ಜಲಾನಯನ ಪ್ರದೇಶವನ್ನು ಹೊಂದಿದ್ದು ಕಂಡುಬಂದಿದೆ. ಅದರಲ್ಲಿ ಪ್ರಮುಖವಾಗಿ ೨೦,೦೦೦ ಸಾವಿರ ಎಕರೆ ಜಲಾನಯನ ಪ್ರದೇಶ, ೧೦,೦೦೦ ಎಕರೆ, ೧,೦೦೦ ಎಕರೆ ಪ್ರದೇಶ ಹಾಗೂ ೪೦೦ ಎಕರೆ ಜಲಾನಯನ ಹೊಂದಿದ ಕೆರೆಗಳು ಕರ್ನಾಟಕ ಹಾಗೂ ಪ್ರಸ್ತುತ ತಾಲೂಕಿನ ಅರಳಿಹಳ್ಳಿ ಗ್ರಾಮದಲ್ಲಿ ಸುಮಾರು ೭೬೯ ಎಕರೆ ಜಲಾನಯನ ಪ್ರದೇಶ ಹೊಂದಿದ ಕೆರೆ ಇರುವುದು ಕಂಡುಬಂದಿದೆ.

ಇಲ್ಲಿನ ಭೌಗೋಳಿಕ ಲಕ್ಷಣದ ಆಧಾರದ ಮೇಲೆ ಕೆರೆಗಳ ನಿರ್ಮಾಣ ಮಾಡಿರುವುದು ಕಂಡು ಬಂದಿದೆ. ಅದೇ ರೀತಿ ಕೆರೆಯ ತಳದಲ್ಲಿ ನೀರು ಶೇಖರಣೆಯಾಗಬೇಕೆಂದರೆ ಆ ಭೂಮಿಯು ಭೌಗೋಳಿಕವಾಗಿ ಸಮೃದ್ಧಿಯಾಗಬೇಕು ಅಂದರೆ ನೀರು ನಿಲ್ಲುತ್ತದೆ. ಒಂದು ಕೆರೆಯಲ್ಲಿ ಸಾಮಾನ್ಯವಾಗಿ ಐದು ಹೆಕ್ಟರ್ ಪ್ರದೇಶ ನೀರು ಇದ್ದು ಅದರ ಕೆಳಮಟ್ಟದಲ್ಲಿ ಒಂದು ಹೆಕ್ಟರ್ ನೀರು ಹೋದರೆ ಉಳಿದ ನಾಲ್ಕು ಹೆಕ್ಟರ್ ನೀರು ಕೆರೆಯಲ್ಲಿ ಉಳಿಯುತ್ತದೆ. ಇಲ್ಲದಿದ್ದರೆ ಬಿಸಿಲಿಗೆ ನೀರು ಆವಿಯಾಗಿ ಹೋಗುತ್ತದೆ. ಹೀಗಾಗದೆ ಇರುವುದಕ್ಕೆ ಅವುಗಳ ತಳದಲ್ಲಿ ಕಲ್ಲಿನ ಗಚ್ಚನ್ನು ನಿರ್ಮಿಸುತ್ತಾರೆ. ಇದರಿಂದ ನೀರಿನ ಇಳಿಮುಖ ಪ್ರಮಾಣ ಕಡಿಮೆಯಾಗುತ್ತದೆ. ಇಲ್ಲಿನ ಕೆರೆಗಳ ಪ್ರಮಾಣದ ಆಧಾರದ ಮೇಲೆ ಅಲ್ಲಿ ಒಂದು ಅಥವಾ ಎರಡು ಕೋಡಿಗಳನ್ನು ನಿರ್ಮಾಣ ಮಾಡಿರುವುದು ಕಂಡು ಬಂದಿದೆ. ಅದೇರೀತಿ ಕೆರೆಗಳಿಗೆ ಹೊಂದಿಕೊಂಡಂತೆ ಕಾಲುವೆಗಳನ್ನು ನಿರ್ಮಿಸಿರುವುದನ್ನು ಕಾಣಬಹುದು.

ಕೆರೆಯಲ್ಲಿನ ನೀರನ್ನು ರಕ್ಷಿಸಬೇಕೆಂದರೆ ಕೆರೆಯಲ್ಲಿ ದೊಡ್ಡದಾದ ಎರಡು ಕಲ್ಲನ್ನು ನಿಲ್ಲಿಸಿ ನಂತರ ಅವುಗಳ ಮೇಲೆ ಅದೇ ಗಾತ್ರದ ಉದ್ದವಾದ ಕಲ್ಲನ್ನು ಇಟ್ಟು ಹಾಗೂ ಅದಕ್ಕೆ ಕಟ್ಟಿಗೆಯ ತುಂಡನ್ನು ಇಡುತ್ತಿದ್ದರು. ಆ ಕಟ್ಟಿಗೆತುಂಡನ್ನು ತೆಗೆದರೆ ನೀರು ಆಯಕಟ್ಟಿನ ಪ್ರದೇಶಕ್ಕೆ ಕಾಲುವೆ ಮುಖಾಂತರ ಹರಿದು ಹೋಗುತ್ತದೆ. ನಂತರ ದಿನಮಾನದಲ್ಲಿ ಕೆರೆಗೆ ಕಬ್ಬಿಣದ ಗೇಟನ್ನು ನಿರ್ಮಿಸುವುದು ರೂಢಿಗೆ ಬಂದಿರುವುದು ಪ್ರಸ್ತುತ ತಾಲೂಕಿನ ಹೆಚ್ಚಿನ ಕೆರೆಗಳಲ್ಲಿ ಕಬ್ಬಿನ ಗೇಟು ಅಥವಾ ತೂಬು ಇರುವುದು ಕಂಡುಬಂದಿವೆ. ಈ ಕೆರೆಯಲ್ಲಿನ ನೀರನ್ನು ಸಮರ್ಪಕವಾಗಿ ಹಂಚಲು ಒಬ್ಬ ನೀರುಗಂಟಿಗನನ್ನು ನೇಮಕ ಮಾಡುತ್ತಿದ್ದರು. ಅವರು ಆ ಪ್ರದೇಶದ ಜನರಿಗೆ ಸಮಾನವಾಗಿ ನೀರನ್ನು ಹಂಚುವುದು ಅವನ ಕಾರ್ಯವಾಗಿತ್ತು. ಅವನಿಗೆ ಬೇಕಾದ ಸೌಲಭ್ಯವನ್ನು ಸರಕಾರ ನೋಡಿಕೊಳ್ಳುತ್ತದೆ.

ಕೆರೆಯ ನಿರ್ಮಾಣದ ಜೊತೆಗೆ ಅದಕ್ಕೆ ಹೊಂದಿಕೊಂಡಂತೆ ಏರಿಯನ್ನು ನಿರ್ಮಿಸುತ್ತಿದ್ದರು. ಏಕೆಂದರೆ ಕೆರೆಯಲ್ಲಿನ ನೀರು ಬೇರೆಡೆಗಡೆಗೆ ಹರಿದು ಹೋಗಬಾರದು ಎನ್ನುವ ಉದ್ದೇಶದಿಂದ ಏರಿಯ ನಿರ್ಮಾಣ ಮಾಡುತ್ತಿದ್ದರು. ಏರಿಯನ್ನು ಕಲ್ಲಿನಿಂದ ಹಾಗೂ ಮಣ್ಣಿನಿಂದ ನಿರ್ಮಿಸುತ್ತಿದ್ದರು. ಕೆರೆಗಳ

ನಿರ್ಮಾಣದ ಕುರಿತು ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಆದರಲ್ಲಿ ಪ್ರಮುಖವಾಗಿ ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರ ಕಾಲದವರೆಗೆ ನೀರಾವರಿ ಕಾಮಗಾರಿಗಳು ಸುಮಾರು ವರ್ಷಗಳ ಕಾಲ ನಿರಂತರವಾಗಿ ನಡೆದು ಬಂದಿದೆ. ಕೆರೆಗಳ ನಿರ್ಮಾಣದ ಕುರಿತು ಹೊಯ್ಸಳರ ಕಾಲವನ್ನು ಸುವರ್ಣಯುಗವೆಂದು ಕರೆಯಲಾಗುತ್ತದೆ.

ಹೂವಿನಹಡಗಲಿ ತಾಲೂಕಿನಲ್ಲಿ ಸುಮಾರು ೧೫೦ ಕ್ಕೂ ಹೆಚ್ಚು ಸಣ್ಣ ಹಾಗೂ ದೊಡ್ಡ ಕೆರೆಗಳಿದ್ದು, ಆದರೆ ಅದರಲ್ಲಿ ಕೆಲವು ಕೆರೆಗಳ ಕುರಿತು ಶಾಸನದಲ್ಲಿ ಭೂಮಿದಾನ ಮಾಡಿದವರ ಹಾಗೂ ಕೆರೆ ನಿರ್ಮಾಣ ಮಾಡಲು ಸಹಾಯ ಮಾಡಿದವರ ಹೆಸರನ್ನು ಅದರಲ್ಲಿ ಉಲ್ಲೇಖಿಸಿರುವುದನ್ನು ಶಾಸನಾಧಾರಗಳಿಂದ ತಿಳಿದುಬಂದಿದೆ. ಅವುಗಳಲ್ಲಿ ಕೆಲವು ಕೆರೆಗಳು ಪ್ರಾಚೀನ ಕಾಲದ ಕೆರೆಗಳಾಗಿವೆ ಅದೇರೀತಿ ಆಧುನಿಕ ಕಾಲದ ಕೆರೆಗಳು ಕಂಡು ಬಂದಿವೆ.

ಕೆರೆಗಳನ್ನು ಹೆಚ್ಚಿನ ರೀತಿಯಲ್ಲಿ ನಿರ್ಮಿಸುವುದಕ್ಕೆ ಪ್ರಮುಖ ಕಾರಣ ಆ ಪ್ರದೇಶದಲ್ಲಿ ಯಾವುದೇ ರೀತಿಯ ನದಿಗಳು ಇಲ್ಲದೇ ಇರುವುದರಿಂದ ಹಾಗೂ ಕೃಷಿಗೆ ಬಳಕೆಯಾಗಲೆಂದು, ಕುಡಿಯಲು ಉಪಯೋಗವಾಗಲೆಂದು ಇಂತಹ ಸಣ್ಣ ಹಾಗೂ ದೊಡ್ಡ ಕೆರೆಗಳನ್ನು ನಿರ್ಮಿಸುತ್ತಿದ್ದರು. ಇದರಿಂದ ಕೆರೆಗಳು ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿವೆ. ಇಂದು ಅವು ವೈಜ್ಞಾನಿಕವಾಗಿ ಹೊಸರೂಪವನ್ನು ಪಡೆದುಕೊಂಡಿವೆ. ಪ್ರಸ್ತುತ ಕ್ಷೇತ್ರಕಾರ್ಯ ಅಧ್ಯಯನ ಸಂದರ್ಭದಲ್ಲಿ ಈ ಪರಿಸರದಲ್ಲಿ ಅತ್ಯಂತ ದೊಡ್ಡ ಹಾಗೂ ಸಣ್ಣ ಕೆರೆಗಳನ್ನು ಕಾಣಬಹುದು. ಅದರಲ್ಲಿ ಪ್ರಮುಖವಾಗಿ ಹೀರೆಮಲ್ಲನ ಕೆರೆ, ಅರಳಹಳ್ಳಿ ಕೆರೆ, ಹಗರನೂರು ಕೆರೆ, ಮುದೇನೂರು ಕೆರೆ, ದಾಸರಹಳ್ಳಿ ಕೆರೆ ಮುಂತಾದವು ಅನೇಕ ಪ್ರದೇಶದಲ್ಲಿ ಕೆರೆಯನ್ನು ನಿರ್ಮಾಣ ಮಾಡಿರುವುದು ಕಂಡುಬಂದಿದೆ. ಈ ತಾಲೂಕಿನ ಎಲ್ಲಾ ಕೆರೆಗಳು ಮಳೆಯಾಶ್ರಿತ ಕೆರೆಗಳಾಗಿವೆ. ಎಂದು ಹೇಳಲಾಗಿದೆ.

ಈ ಕೆರೆಗಳಲ್ಲಿ ಕೆಲವು ಪ್ರಕಾರಗಳಿವೆ ಅವು ಹೀಗೆ ವಿಂಗಡಿಸಬಹುದು. ನದಿ ಆಶ್ರಿತಕೆರೆ, ಕೊಳವೆ ಬಾವಿಯನ್ನು ಅವಲಂಬಿಸಿರುವಕೆರೆ, ಸರಪಣಿಕೆರೆ, ಮಳೆಯಾಶ್ರಿತಕೆರೆ ಮುಂತಾದವುಗಳು ಇವುಗಳಲ್ಲಿ ಹೆಚ್ಚಿನವು ಮಳೆಯಾಶ್ರಿತ ಕೆರೆಗಳಾಗಿವೆ. ಈ ರೀತಿಯಾಗಿ ಕೆರೆಗಳ ನಿರ್ಮಾಣವನ್ನು ಮಾಡಿರುವುದು ಕಂಡು ಬಂದಿವೆ.

**ಜಲಾನಯನ ಪ್ರದೇಶ :**

ಜಲಾನಯನ ಪ್ರದೇಶವು ಕೆಲವೊಂದು ಸ್ಥಳಗಳಲ್ಲಿ ಭಿನ್ನವಾಗಿರುತ್ತವೆ. ಅಂದರೆ ಕೆರೆಗಳ ರಚನೆಯ ವಿಸ್ತಾರದಲ್ಲಿ ಹೆಚ್ಚು ಕಡಿಮೆಯಾಗಿರುತ್ತದೆ. ಅದರಲ್ಲಿ ಕರ್ನಾಟಕವನ್ನು ಕುರಿತು ಅಧ್ಯಯನವನ್ನು ಮಾಡಿದರ ಕುರಿತು ಕೆಲವು ಉಲ್ಲೇಖಗಳ ಪ್ರಕಾರ ೨೦,೦೦೦ ಎಕರೆ ಜಲಾನಯನವನ್ನು ಹೊಂದಿದ ಪ್ರದೇಶ ಅದೇ ರೀತಿ ೧೦,೦೦೦ ಎಕರೆ, ೧,೦೦೦ ಎಕರೆ ಹಾಗೆಯೇ ಪ್ರಸ್ತುತ ತಾಲೂಕಿನಲ್ಲಿ ಸುಮಾರು ೭೯೬ ಎಕರೆ ಜಲಾನಯನ ಪ್ರದೇಶ ಹೊಂದಿದ ಕೆರೆಯನ್ನು ನೋಡಬಹುದಾಗಿದೆ. ಕೆರೆಗಳಿಗೆ ಎತ್ತರ ಪ್ರದೇಶದಿಂದ ನೀರು ಕಾಲುವೆ ಮುಖಾಂತರ ಬಂದು ಸಂಗ್ರಹವಾಗುವ ಪ್ರದೇಶವನ್ನು ಜಲಾನಯನ ಪ್ರದೇಶವೆಂದು ಕರೆಯುತ್ತಾರೆ. ಇಂತಹ ಒಂದು ವಿಧಾನವನ್ನು ತಾಲೂಕಿನ ಪ್ರಮುಖ ಕೆರೆಗಳಲ್ಲಿ ನೋಡಬಹುದಾಗಿದೆ. ಉದಾಹರಣೆಗೆ ಹೂವಿನ ಹಡಗಲಿ ತಾಲೂಕಿನ ಹೊಳೆಗುಂದಿ, ಕಾಂತೇಬೆನ್ನೂರು ಗ್ರಾಮದಲ್ಲಿ ಕಾಡು ಹಾಗೂ ಗುಡ್ಡಗಳಿಂದ ಕೆರೆಗೆ ನೀರು ಬಂದು ಸಂಗ್ರಹವಾಗುತ್ತದೆ. ಆದ್ದರಿಂದ ಈ ಕೆರೆಯನ್ನು ಜಲಾನಯನ ಪ್ರದೇಶವೆಂದು ಕರೆಯಬಹುದಾಗಿದೆ. ಕೆರೆಯನ್ನು ತಲುಪುವ ನೀರಿನ ಪ್ರಮಾಣವನ್ನು ಜಲಾನಯನ ಪ್ರದೇಶಕ್ಕೂ ಅಲ್ಲಿ ಬಿಳುವ ಮಳೆಯ ಪ್ರಮಾಣಕ್ಕೂ ಸಂಬಂಧವಿರುತ್ತದೆ.

**ಕೆರೆಯ ಏರಿ :**

ಏರಿಯು ಕೆರೆಯ ಒಂದು ಭಾಗವಾಗಿದೆ. ಇದು ನೀರನ್ನು ಆಯಕಟ್ಟಿನ ಭಾಗಕ್ಕೆ ಹರಿದು ಹೊಗಬಾರದೆಂದು ಕೆರೆಯಲ್ಲಿ ಏರಿಯನ್ನು ನಿರ್ಮಾಣ ಮಾಡುತ್ತಾರೆ. ಹೂವಿನ ಹಡಗಲಿ ತಾಲೂಕಿನ ಪ್ರಮುಖ ಕೆರೆಗಳ ಕುರಿತು ಕ್ಷೇತ್ರಾಧ್ಯಯನ ಮಾಡುವ ಸಮಯದಲ್ಲಿ ಕಂಡುಬಂದ ಮಾಹಿತಿ ಪ್ರಕಾರ ಈ ಪ್ರದೇಶದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿರುವ ಕೆರೆಗೆ ಏರಿಗಳ ನಿರ್ಮಾಣ ಇದ್ದೇ ಇರುತ್ತದೆ. ಅವು ಯಾವ ರೂಪದಲ್ಲಿ, ಆಕರದಲ್ಲಿ, ಶೈಲಿಯಲ್ಲಿ, ವಿದಥಲ್ಲಿರುತ್ತವೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ. ಯಾರ ಮಾರ್ಗದರ್ಶನದಲ್ಲಿ ಏರಿ ನಿರ್ಮಾಣದ ಕಾರ್ಯವನ್ನು ಕೈಗೊಳ್ಳುತ್ತಾರೆ ಮತ್ತು ಅದನ್ನು ಕಟ್ಟಲು ಯಾವ ವಿಧಾನವನ್ನು ಉಪಯೋಗಿಸುತ್ತಾರೆ. ಹಾಗೂ ಏರಿಯನ್ನು ಹೇಗೆ ನಿರ್ಮಾಣ ಮಾಡಬೇಕು ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಬಹುದಾಗಿದೆ.

ಕೆರೆಯನ್ನು ಯಾವ ಪ್ರಮಾಣದಲ್ಲಿ ನಿರ್ಮಿಸುತ್ತಾರೋ ಅದರ ಆಧಾರದ ಮೇಲೆ ಏರಿಯ ನಿರ್ಮಾಣ ಮಾಡುತ್ತಾರೆ. ಏಕೆಂದರೆ ಕೆರೆಯು ದೊಡ್ಡದಿದ್ದು, ಅದರ ಏರಿಯು ಚಿಕ್ಕದಾಗಿ ನಿರ್ಮಾಣ ಮಾಡಿವರೆ, ಅದಕ್ಕೆ ಕೆರೆಯ ಪ್ರಮಾಣದಲ್ಲಿ ಏರಿಯ ನಿರ್ಮಾಣ ಮಾಡಿರುವುದು ಕಂಡುಬಂದಿವೆ.

ಕೆಲವೊಂದು ಕೆರೆಯ ಏರಿಯು ಒಂದು ಕಿ.ಮೀಗಿಂತ ಹೆಚ್ಚಿನ ಉದ್ದವಾದ ಏರಿಯನ್ನು ನೋಡಬಹುದಾಗಿದೆ. ಉದಾಹರಣೆಗೆ: ಹಿರೇ ಮಲ್ಲನಕೆರೆ, ಹಿರೇ ಹಡಗಲಿ ಕೆರೆ, ಮುದೇನೂರು ಕೆರೆ, ದೇವರಕೊಂಡನಹಳ್ಳಿ ಕೆರೆ ಗ್ರಾಮದಲ್ಲಿ ೧೦೦೦, ಮೀ ಉದ್ದವಿರುವ ಏರಿಯನ್ನು ನಿರ್ಮಿಸಿರುವುದು ಕಂಡು ಬಂದಿದೆ. ಅದೇ ರೀತಿ ಸಣ್ಣ ಪ್ರಮಾಣದ ಏರಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ: ಕಾಂತೇಬೆನ್ನೂರು ಕೆರೆ, ಹೊಳಗುಂದಿಕೆರೆ, ಕುರುವತ್ತಿಕೆರೆ ಮುಂತಾದವುಗಳು ವಿವಿಧ ರೀತಿಯಲ್ಲಿ ನಿರ್ಮಾಣವಾಗಿರುವುದನ್ನು ಕಾಣುತ್ತೇವೆ.

ಕೆರೆಯ ಏರಿಯನ್ನು ಮಣ್ಣು ಮತ್ತು ಕಲ್ಲಿನಿಂದ ಕಟ್ಟುತ್ತಾರೆ. ಕೆರೆಯನ್ನು ಕಟ್ಟುವುದರಲ್ಲಿ ಅನುಭವವಿರುವವರನ್ನು ಅಥವಾ ಇಂಜನಿಯರಗಳನ್ನು ಮಾತ್ರ ಈ ಕೆಲಸದಲ್ಲಿ ತೊಡಗಿಸಿಕೊಳ್ಳಲಾಗುತ್ತದೆ. ಏಕೆಂದರೆ ಅವರಿಗೆ ಅದರ ಬಗ್ಗೆ ಸಂಪೂರ್ಣ ಮಾಹಿತಿ ಇರುತ್ತದೆ. ಆದ್ದರಿಂದ ಏರಿಗೆ ಯಾವ ಹಾನಿಯಾಗದಂತೆ ಕಲ್ಲು ಹಾಗೂ ಮಣ್ಣನ್ನು ಹಾಕಿ ಅದನ್ನು ಗಟ್ಟಮಾಡುತ್ತಾರೆ. ಕೆರೆಯಲ್ಲಿ ಮಳೆಯ ನೀರಿನ ಪ್ರಮಾಣ ಹೆಚ್ಚಾದಾಗ ಕೆರೆಯ ಏರಿ ಒಡೆಯುವ ಸಾಧ್ಯತೆ ಇರುತ್ತದೆ ಇದರ ನಿರ್ಮಾಣಕ್ಕೆ ಇಂಜನಿಯರಗಳ ಅವಶ್ಯಕತೆ ಇರುತ್ತದೆ.

ಕೆರೆಯ ಏರಿಯನ್ನು ಗಟ್ಟಿಯಾಗಿ ಕಟ್ಟಬೇಕು. ಅದನ್ನು ದೊಡ್ಡ-ದೊಡ್ಡ ಕಲ್ಲು ಹಾಗೂ ಮಣ್ಣನ್ನು ನೀರನಲ್ಲಿ ನೆನಸಿ ಅದನ್ನು ಹದವಾಗುವಂತೆ ಮಾಡಿ ಅದನ್ನು ಕಲ್ಲಿನೊಂದಿಗೆ ಬೆರಸಿ ಒಳ ಮತ್ತು ಹೊರ ಭಾಗದಲ್ಲಿ ಹಾಕಿ ನಿರ್ಮಿಸಬೇಕು. ಕೆರೆಯ ಏರಿಗೆ ಮಣ್ಣನ್ನು ಕೆರೆಯ ತಳದಲ್ಲಿರುವ ಮಣ್ಣನ್ನು ತೆಗೆದುಕೊಳ್ಳಬೇಕಾಗುತ್ತದೆ. ಏರಿಯನ್ನು ತಳಭಾಗದಲ್ಲಿ ಬಹಳ ಅಗಲವಾಗಿ ಕಟ್ಟುತ್ತಾ ಬರುತ್ತಾರೆ ನಂತರ ಅದು ಮೇಲೆ ಹೊದಂತೆ ಅದರ ಪ್ರಮಾಣವನ್ನು ಕಡಿಮೆ ಮಾಡುತ್ತಾ ಬರುತ್ತಾರೆ. ಕೆರೆಯ ಒಳ ಪಾರ್ಶ್ವದಲ್ಲಿ ಸಾಮಾನ್ಯವಾಗಿ ಕಲ್ಲಿನಿಂದ ನಿರ್ಮಿಸಿರುತ್ತಾರೆ. ಅದೇ ರೀತಿ ಹೊರ ಪಾರ್ಶ್ವವನ್ನು ಮಣ್ಣಿನಿಂದ ಕಟ್ಟಿರುವುದು ಕಂಡುಬರುತ್ತದೆ. ಈ ರೀತಿ ನಿರ್ಮಿಸುವುದರಿಂದ ಕೆರೆಯ ಏರಿಗೆ ಹಾಗೂ ಮಣ್ಣಿನ ಕೊರತೆಯನ್ನು ಸಾಕಷ್ಟು ಮಟ್ಟಿಗೆ ತಡೆಯುತ್ತದೆ. ಇದರಿಂದ ಯಾವುದೇ ರೀತಿಯ ಧಕ್ಕೆಯಾಗುವುದಿಲ್ಲ. ನೀರಿನ ಒತ್ತಡವನ್ನು ವಿರುದ್ಧ ದಿಕ್ಕಿನಿಂದ ತಡೆದು ಸಾಕಷ್ಟು ಬಲವನ್ನು ಕೊಡುವಲ್ಲಿ ಸಹಾಯಕವಾಗುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಕೆರೆಯ ಏರಿಯನ್ನು ಗಮನಿಸಿದಾಗ ಅವು ಒಂದೇ ರೀತಿಯಾಗಿರದೇ ಬೇರೆ ಬೇರೆ ರಚನಾ ಶೈಲಿಯನ್ನು ಹೊಂದಿದ್ದು ಕಂಡುಬಂದಿದೆ. ಏರಿಯನ್ನು ಯಾವಾಗಲೂ ನೇರವಾಗಿ ಕಟ್ಟದೇ ಅಂಕುಡೊಂಕಾಗಿ ಅದರ ನಿರ್ಮಾಣ ಮಾಡುತ್ತಾರೆ. ಏಕೆಂದರೆ ನೀರಿನಿಂದ ಏರಿಗೆ ಬೀಳುವ ಒತ್ತಡವು ಸಮನಾಗಿ ಹಂಚಿಹೋಗುತ್ತದೆ. ಏರಿಯು ಒಡೆದಲ್ಲಿ ಅದನ್ನು ಸುಲಭವಾಗಿ ಕಟ್ಟಬಹುದು ಎನ್ನುವ

ಉದ್ದೇಶದಿಂದ ಈ ರೀತಿ ರಚನಾ ಕ್ರಮವನ್ನು ಅಳವಡಿಸಿಕೊಂಡಿದ್ದಾರೆ. ಇದು ವೈಜ್ಞಾನಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ.

**ತೂಬುಗಳ ರಚನೆ**

ತೂಬುಗಳು ಕೆರೆಯ ಒಂದು ಅವಿಭಾಜ್ಯ ಅಂಗ. ಇವುಗಳ ರಚನೆ ಒಂದೊಂದು ಪ್ರದೇಶದಲ್ಲಿ ಭಿನ್ನವಾಗಿರುವುದು ಕಂಡು ಬಂದಿದೆ. ಪ್ರಸ್ತುತ ತಾಲೂಕಿನಲ್ಲಿ ಇವುಗಳ ರಚನೆಯನ್ನು ನೋಡಿದಾಗ ಇಲ್ಲಿ ಪ್ರಮುಖವಾಗಿ ಕಬ್ಬಿಣದ ಬಾಗಿಲುಗಳು ಹಾಗೂ ಕಬ್ಬಿಣದ ತೂಬುಗಳ ಪ್ರಮಾಣ ಹೆಚ್ಚಾಗಿ ಕಂಡು ಬಂದಿದೆ. ತೂಬನ್ನು ಕೆರೆಯಲ್ಲಿನ ನೀರಿನ ಪ್ರಮಾಣ ಕಡಿಮೆಯಾಗದಿರಲೆಂದು ಅಥವಾ ನೀರು ಕೆರೆಯಿಂದ ಹೊರಗೆ ಹೊಗದಿರಲೆಂದು ತೂಬುಗಳ ರಚನೆ ಅನಿವಾರ್ಯವಾಗಿತ್ತು. ಆದ್ದರಿಂದ ತೂಬುಗಳನ್ನು ಕೆರೆಯ ರಚನೆಯ ಮೇಲೆ ಇವುಗಳನ್ನು ನಿರ್ಮಾಣ ಮಾಡಲಾಗುತ್ತಿತ್ತು. ತಾಲೂಕಿನ ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಕಂಡುಬಂದ ತೂಬುಗಳ ಪ್ರಕಾರ ಕೆಲವೊಂದನ್ನು ದೊಡ್ಡ ದೊಡ್ಡ ಕಲ್ಲುಗಳಿಂದ ಒಂದು ಕೆರೆಯಲ್ಲಿ ಎರಡು ಉದ್ದ ಹಾಗೂ ದಪ್ಪವಾದ ಕಲ್ಲನ್ನು ಇಡುತ್ತಿದ್ದರು. ನಂತರ ಅದರ ಮೇಲೆ ಅಷ್ಟೇ ಪ್ರಮಾಣದ ಉದ್ದವಾದ ಕಲ್ಲನ್ನು ಇಟ್ಟು ತೂಬಿನ ರಚನೆ ಮಾಡುತ್ತಿದ್ದರು. ಅದೇ ರೀತಿ ಅವುಗಳ ಮೇಲೆ ಕಟ್ಟಿಗೆಯ ತುಂಡನ್ನು ಇಡುವುದು ಒಂದು ಕ್ರಮವಾಗಿತ್ತು. ಕೆಲವೊಂದು ಪ್ರದೇಶದಲ್ಲಿ ಈ ಕ್ರಮ ರೂಢಿಯಲ್ಲಿತ್ತು. ಮತ್ತೆ ಕೆಲವು ಬೃಹತ್ತಾದ ಕೆರೆಗಳಲ್ಲಿ ಒಂದು, ಎರಡು, ಮೂರು, ನಾಲ್ಕು ಈ ರೀತಿಯ ತೂಬುಗಳನ್ನು ನಿರ್ಮಿಸುತ್ತಿದ್ದರು. ಉದಾಹರಣೆಗೆ: ಹಗರನೂರುನಲ್ಲಿ ಮೂರು, ಹಿರೇ ಹಡಗಲಿಯಲ್ಲಿ ಎರಡು, ಮಲ್ಲನಕೆರೆಯಲ್ಲಿ ಎರಡು ಹೀಗೆ ಇನ್ನೂ ಮುಂತಾದ ಕೆರೆಗಳಲ್ಲಿ ಇವುಗಳನ್ನು ಕಲ್ಲಿನಿಂದ ನಿರ್ಮಿಸಿರುವುದು ಕಂಡುಬಂದಿದೆ. ಮತ್ತೆ ಕೆಲವು ಪ್ರದೇಶದಲ್ಲಿ ಎರಡು ತೂಬುಗಳ ನಿರ್ಮಾಣ ಮಾಡಿರುವುದು. ಉದಾಹರಣೆಗೆ: ಕಾಂತೇಬೆನ್ನೂರು, ಕುರುವತ್ತಿ ಹೀಗೆ ಒಂದೊಂದು ತೂಬು ಇರುವುದು ಕಂಡುಬಂದಿವೆ. ಈ ಪರಿಸರದಲ್ಲಿ ಕಲ್ಲಿನ ಕಟ್ಟಡದ ಮೇಲೆ ಕಬ್ಬಿನ ರಚನೆಯ ತೂಬು ಕಂಡುಬಂದಿವೆ. ಈ ಎರಡು ವ್ಯಾಸದ ಮೇಲೆ ೨೫. ಸೆ.ಮೀ ವ್ಯಾಸದ ರಂಧ್ರವನ್ನು ಮುಚ್ಚಲಾಗುತ್ತಿತ್ತು. ಅದರಲ್ಲಿರುವ ದಿಮ್ಮಿಯನ್ನು ಮೇಲಕ್ಕೆತ್ತಿದಾಗ ನೀರು ಕಾಲುವೆ ಮುಖಾಂತರ ಹರಿದು ಬಂದು ಆಯಕಟ್ಟಿನ ಪ್ರದೇಶಕ್ಕೆ ಹೋಗುತ್ತದೆ.

ಹೂವಿನ ಹಡಗಲಿ ಪರಿಸರದಲ್ಲಿ ಗಜಲಕ್ಷ್ಮೀ ಶಿಲ್ಪವಿರುವ ತೂಬು ಯಾವ ಪ್ರದೇಶದಲ್ಲೂ ಕಂಡು ಬಂದಿಲ್ಲ. ಆದರೆ ಇಲ್ಲಿ ವಿಶೇಷವೆಂದರೆ ತೂಬಿನ ರಚನೆಯಲ್ಲಿ ಒಂದಾದ ವೃತ್ತಾಕಾರದ ತೂಬು ಇರುವುದು ಕಂಡು ಬಂದಿದೆ. ಉದಾಹರಣೆಗೆ: ತಳಕಲ್ಲು ಕೆರೆಯಲ್ಲಿ ಈ ರೀತಿಯ ತೂಬು ಇದೆ. ತೂಬುಗಳನ್ನು ಕಾಲುವೆಗೆ ಅನುಗುಣವಾಗಿ ನಿರ್ಮಾಣ ಮಾಡುತ್ತಾರೆ. ಏಕೆಂದರೆ ನೀರಿನ ಪ್ರಮಾಣ ಹೆಚ್ಚಾದಾಗ ಆ

ರಂಧ್ರದ ಭಾಗದಲ್ಲಿರು ಕಟ್ಟಿಗೆ ಅಥವಾ ಕಬ್ಬಿಣದ ಬಾಗಿಲನ್ನು ತೆಗೆದಾಗ ನೀರು ಸಹಜವಾಗಿ ಕಾಲುವೆ ಮುಖಾಂತರ ಹೊರಗಡೆ ಹೋಗುತ್ತದೆ. ಅವುಗಳನ್ನು ವಿವಿಧ ಎತ್ತರಗಳಲ್ಲಿ ಅಳವಡಿಸಲಾಗುತ್ತದೆ. ಕೆರೆಯ ವಿಸ್ತಾರ, ನೀರಿನ ಸಾಮರ್ಥ್ಯವನ್ನು ಗಮನದಲ್ಲಿಟ್ಟುಕೊಂಡು ತೂಬುಗಳ ರಚನೆ ಮಾಡಲಾಗುತ್ತದೆ. ಸಾಮಾನ್ಯವಾಗಿ ಹೆಚ್ಚಾಗಿ ಕೆರೆಯ ಏರಿಯ ಮೇಲೆ ತೂಬುಗಳನ್ನು ರಚನೆ ಮಾಡುತ್ತಾರೆ. ಇದರಿಂದ ಕೆರೆಗೆ ಯಾವ ಅಪಾಯವಾಗುವುದಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ಪ್ರಮುಖವಾಗಿ ಕೆರೆಯ ಏರಿಯ ಮೇಲೆ ಹೆಚ್ಚಾಗಿ ಕಂಡುಬರುತ್ತವೆ. ಕೆರೆಯ ನೀರನ್ನು ಆಯಕಟ್ಟಿನ ಪ್ರದೇಶಕ್ಕೆ ಹಾಯಿಸಬೇಕೆಂದಾಗ ಅವುಗಳ ಮೇಲಿರುವ ಕಬ್ಬಿಣದ ಹಾಗೂ ಮರದ ತುಂಡನ್ನು ನೀರನ್ನು ಹಾಯಿಸುವುದು ಕಂಡುಬಂದಿದೆ. ಈ ಒಂದು ವ್ಯವಸ್ಥೆ ಹೂವಿನ ಹಡಗಲಿ ತಾಲೂಕಿನಲ್ಲಿ ಕಂಡು ಬಂದಿದೆ.

**ಕಾಲುವೆ ವ್ಯವಸ್ಥೆ**

ಕಾಲುವೆ ವ್ಯವಸ್ಥೆ ಕೆರೆಯ ಇನ್ನೊಂದು ಭಾಗವಾಗಿದೆ. ಯಾವುದೇ ಒಂದು ಕೆರೆ, ಹಳ್ಳ, ಕೊಳ್ಳ, ನದಿಯನ್ನು ನಿರ್ಮಿಸಬೇಕೆಂದರೆ ಅದಕ್ಕೆ ಪೂರಕವಾದ ಸ್ಥಳದಿಂದ ನೀರು ಬರುವ ಜಾಗದಿಂದ ಈ ಒಂದು ವ್ಯವಸ್ಥೆಯನ್ನು ಕೈಗೊಳ್ಳಲಾಗುತ್ತದೆ. ಅದು ಯಾವ ಪ್ರಮಾಣದಲ್ಲಿ ಇದಕ್ಕೆ ನೀರು ಬಂದು ಸೇರುತ್ತದೆ ಎಂಬ ಉದ್ದೇಶದಿಂದ ಇಂತಹ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಪ್ರಸ್ತುತ ಅಧ್ಯಯನದಲ್ಲಿ ಕಾಲುವೆಯನ್ನು ಕೆರೆಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಏಕೆಂದರೆ ಇದರ ಮೂಲಕ ಕೆರೆಗೆ ನೀರು ಬಂದು ಸಂಗ್ರಹವಾಗುತ್ತದೆ. ಹೂವಿನ ಹಡಗಲಿ ಪರಿಸರವು ಮಲೆನಾಡು ಹಾಗೂ ಅರೆಮಲೆನಾಡು ಪ್ರದೇಶವಾಗಿದ್ದರಿಂದ ಈ ಸ್ಥಳದಲ್ಲಿ ಮಳೆಯ ಪ್ರಮಾಣ ಹೆಚ್ಚಾಗಿರುತ್ತದೆ. ಆದ್ದರಿಂದ ಕಾಲುವೆಗಳ ವ್ಯವಸ್ಥೆ ಅನಿವಾರ್ಯ ಎಂದು ಹೇಳಬಹುದು ಇದರಿಂದ ಕೆರೆಗೆ ನೀರು ಕಾಲುವೆ ಮುಖಾಂತರ ಬಂದು ಸೇರುತ್ತದೆ. ಎನ್ನುವ ಉದ್ದೇಶದಿಂದ ಈ ಒಂದು ವ್ಯವಸ್ಥೆಯನ್ನು ರೂಪಿಸಲಾಗಿದೆ. ಪ್ರತಿ ಕೆರೆಯ ಪ್ರಮಾಣದ ಆಧಾರದ ಮೇಲೆ ಆ ಸ್ಥಳದಲ್ಲಿ ಒಂದು ಎರಡು ಹಾಗೂ ಕೆಲವೊಂದು ಕೆರೆಯಲ್ಲಿ ನಾಲ್ಕು ಕಾಲುವೆಗಳನ್ನು ನಿರ್ಮಿಸಿರುವುದು ಕಂಡುಬಂದಿದೆ. ಉದಾಹರಣೆಗೆ: ಹೂವಿನ ಹಡಗಲಿ ಪರಿಸರದಲ್ಲಿ ಹೆಚ್ಚಾಗಿ ಎರಡು ಕಾಲುವೆ ಇರುವುದು ಕಂಡುಬಂದಿದೆ. ಕಾಲುವೆಯ ರಚನೆಯನ್ನು ಕಲ್ಲು ಹಾಗೂ ಮರಳಿನಿಂದ ಕಟ್ಟುತ್ತಿದ್ದರು ಅದೇರೀತಿ ಇವು ಪ್ರಮಾಣದಲ್ಲಿ ಉದ್ದವಾಗುತ್ತವೆ ಎಂದು ತಿಳಿದುಬಂದಿದೆ. ಈ ವ್ಯವಸ್ಥೆ ಮುಖಾಂತರ ಆಯಕಟ್ಟಿನ ಪ್ರದೇಶಗಳಿಗೆ ನೀರನ್ನು ಹರಿಸಲಾಗುತ್ತದೆ. ಕಾಲುವೆ ನಿರ್ಮಾಣದ ಕುರಿತು ವಿಜಯನಗರ ಅರಸರ ಕಾಲದಲ್ಲಿ ತುಂಬಾ ವ್ಯವಸ್ಥಿತವಾಗಿ ಕಾಲುವೆ ನಿರ್ಮಾಣ ಮಾಡಿರುವುದು ಕಂಡುಬಂದಿದೆ ಎಂದು ಹೇಳಲಾಗಿದೆ.

**ಕೋಡಿಗಳು**

ಕೋಡಿಯು ಕೆರೆಯ ಮುಖ್ಯವಾದ ಒಂದು ಭಾಗವಾಗಿದೆ. ಇವುಗಳನ್ನು ಕೆರೆಯ ತುದಿಗಳಲ್ಲಿ ನಿರ್ಮಿಸುತ್ತಿದ್ದರು. ಕೆರೆಯ ವಿಸ್ತಾರದ ಪ್ರಮಾಣವನ್ನು ನೋಡಿಕೊಂಡು ಇವುಗಳನ್ನು ರಚನೆ ಮಾಡಿಸುತ್ತಿದ್ದರು. ಏಕೆಂದರೆ ಕೆರೆ ದೊಡ್ಡದಾಗಿದ್ದು ಅದೇ ಪ್ರಮಾಣದಲ್ಲಿ ಕೋಡಿಯನ್ನು ನಿರ್ಮಿಸಬೇಕು. ಇಲ್ಲದಿದ್ದರೆ ಕೆರೆಯ ಏರಿ ಒಡೆದು ಆಯಕಟ್ಟಿನ ಪ್ರದೇಶದಲ್ಲಿರುವ ಗದ್ದೆ, ಮನೆಗಳಿಗೆ ಹಾನಿ ಉಂಟಾಗಬಾರದು ಎನ್ನುವ ಉದ್ದೇಶದಿಂದ ಅವುಗಳನ್ನು ಕೆರೆಯ ವಿಸ್ತೀರ್ಣದ ಪ್ರಮಾದಲ್ಲಿ ಕೋಡಿಯನ್ನು ನಿರ್ಮಿಸಿರುವುದು ಕಂಡು ಬಂದಿದೆ. ಉದಾಹರಣೆಗೆ: ಹಿರೇಹಡಗಲಿ ಗ್ರಾಮದಲ್ಲಿ ಅತೀ ದೊಡ್ಡದಾದ ಕೆರೆಯಿದೆ ಅದರ ವಿಸ್ತೀರ್ಣಕ್ಕೆ ತಕ್ಕಂತೆ ಕೋಡಿಯನ್ನು ನಿರ್ಮಾಣ ಮಾಡಿರುವುದು ಕಂಡುಬಂದಿದೆ.

ಕೋಡಿಗಳನ್ನು ಮುಖ್ಯವಾಗಿ ಕಲ್ಲಿನಿಂದ ಕಟ್ಟಿರುತ್ತಾರೆ. ಆದರೆ ಕೆಲವೊಂದು ಸ್ಥಳದಲ್ಲಿ ಬರೀ ಮಣ್ಣಿನಿಂದ ರಚನೆಯಾದ ಕೋಡಿಗಳನ್ನು ಈ ಒಂದು ಅಧ್ಯಯನದಲ್ಲಿ ಕಂಡು ಬಂದಿದೆ. ಉದಾಹರಣೆಗೆ: ದೇವಗೊಂಡನಹಳ್ಳಿ ಕೆರೆ, ಕುರುವತ್ತಿ ಕೆರೆ, ಗ್ರಾಮದಲ್ಲಿ ಮಣ್ಣಿನ ಕೋಡಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಕೆರೆಯಲ್ಲಿ ಕೋಡಿಯನ್ನು ನಿರ್ಮಾಣ ಮಾಡಬೇಕೆಂದರೆ ಅದಕ್ಕೆ ಸರಿಯಾದ ಜಾಗವನ್ನು ಆಯ್ಕೆ ಮಾಡಿಕೊಂಡು ಅಲ್ಲಿ ಕೋಡಿ ನಿರ್ಮಿಸಬೇಕು ಇದರಲ್ಲಿಯೇ ಕೆರೆ ಕಟ್ಟುವವನ ಸಾಮರ್ಥ್ಯ ಎಂತಹದು ಎಂದು ತೋರಿಸಿಕೊಡುತ್ತದೆ. ಸಾಮಾನ್ಯವಾಗಿ ಕೋಡಿಯನ್ನು ಕೆರೆಯಲ್ಲಿ ನೀರು ಹರಿದು ಬರುವ ಜಾಗದಲ್ಲಿ ನಿರ್ಮಿಸಬೇಕು. ಕೆರೆಯ ನೀರಿನ ಗರಿಷ್ಠಮಟ್ಟ ಹೆಚ್ಚಾದಾಗ ಕೋಡಿಯ ಮುಖಾಂತರ ಅದರ ಮೇಲೆ ನೀರು ಹಾದು ಹೋಗುತ್ತದೆ. ಆದರೆ ಅದರಲ್ಲಿನ ಮಣ್ಣು ಮಾತ್ರ ಅಲ್ಲಿಯೇ ಉಳಿಯುತ್ತದೆ. ಈ ರೀತಿಯ ಉದ್ದೇಶದಿಂದ ಕೆರೆಯ ಏರಿಗೆ ಯಾವುದೇ ಹಾನಿಯಾಗದಿರಲೆಂದು ಕೋಡಿಯನ್ನು ಕಟ್ಟುತ್ತಾರೆ.

ಒಂದೊಂದು ಪ್ರದೇಶದಲ್ಲಿ ವಿವಿಧ ರೀತಿಯ ಕೋಡಿಗಳು ಇರುವುದು ಕಂಡುಬರುತ್ತವೆ. ಪ್ರಾಚೀನ ಕಾಲದ ಜನರು ಕೋಡಿಯನ್ನು ಈ ರೀತಿಯಾಗಿ ನಿರ್ಮಿಸುತ್ತಿದ್ದರು. ಕೆರೆಯ ಎರಡು ತುದಿಗೆ ಕಂಬಗಳನ್ನು ಇಡುತ್ತಿದ್ದರು ಕೋಡಿಯು ಬಿದ್ದ ಪೂರ್ವದಲ್ಲಿ ಕಂಬಗಳ ಮೂಲಕ ಕೆರೆಯ ಏರಿಯ ಒಂದು ತುದಿಯಿಂದ ಇನ್ನೊಂದು ತುದಿಗೆ ಕಂಬವನ್ನು ಅನುಕೂಲವಾಗಲೆಂದು ಈ ಒಂದು ವ್ಯವಸ್ಥೆಯನ್ನು ಮಾಡುತ್ತಿದ್ದರು.

**ಕೆರೆಗಳ ನಿರ್ವಹಣೆ**

ಪ್ರಾಚೀನ ಕಾಲದಿಂದ ಭಾರತದಲ್ಲಿ ಕೆರೆಗಳ ನಿರ್ಮಾಣದ ಜೊತೆಗೆ ಅದರ ನಿರ್ವಹಣೆಗೆ ಸಹ ಬಹಳ ಪ್ರಾಧ್ಯಾನ್ಯತೆಯನ್ನು ಕೊಡುತ್ತಾ ಬಂದಿದ್ದಾರೆ. ಈ ನಿರ್ವಹಣೆ ಕಾರ್ಯವನ್ನು ಮಾಡದಿದ್ದರೆ ಕೆರೆಯ

ನೀರು ಹಾಳಾಗಿ ಕಲುಷಿತವಾಗಿ ಊರಿನಲ್ಲಿ ರೋಗಗಳು ಅಂಟಿಕೊಳ್ಳುತ್ತವೆ. ಆದ್ದರಿಂದ ಕೆರೆಗಳ ನಿರ್ವಹಣೆಯ ಕಾರ್ಯವನ್ನು ರೂಢಿಸಿಕೊಂಡರು. ಕೆರೆಗಳ ನಿರ್ವಹಣೆಯನ್ನು ಪ್ರಾಚೀನ ಕಾಲದಲ್ಲಿ ರಾಜರು, ಅಧಿಕಾರಿವರ್ಗದವರು, ಸಾಮಂತರು ಹಾಗೂ ಕೆಲವೊಮ್ಮೆ ನೀರುಗಂಟಿಗರು ಇದರ ನಿರ್ವಹಣೆಯ ಕಾರ್ಯವನ್ನು ಅವನು ನೋಡಿಕೊಂಡು ಹೊಗಬೇಕಾಗುತ್ತದೆ. ಯಾರು ಇಲ್ಲದಿದ್ದಾಗ ಸರಕಾರವೇ ಇದರ ನಿರ್ವಹಣೆಯನ್ನು ಮಾಡಬೇಕಾಗುತ್ತದೆ.

ಕೆರೆಗೆ ನೀರು ಕಾಲುವೆ ಮುಖಾಂತರ ಬಂದು ಸೇರುವ ಸಂದರ್ಭದಲ್ಲಿ ಅದರ ಜೊತೆಗೆ ಮಣ್ಣು ಸಹ ಬಂದು ಶೇಖರಣೆಯಾಗಿರುತ್ತದೆ. ಇದರಿಂದ ಕೆರೆಯಲ್ಲಿ ನೀರಿನ ಪ್ರಮಾಣ ಕಡಿಮೆಯಾಗುತ್ತದೆ. ಅದನ್ನು ಕೋಡಿಯ ವ್ಯವಸ್ಥೆಯನ್ನು ಮಾಡುತ್ತಿದ್ದರು. ಕೆರೆಯಲ್ಲಿರುವ ಹೆಚ್ಚಿಗೆ ಮಣ್ಣನ್ನು ಹೂಳೆತ್ತುವ ಕಾರ್ಯವನ್ನು ಸರಕಾರವು ನೋಡಿಕೊಳ್ಳುತ್ತದೆ. ಇದರಿಂದ ಕೆರೆಯಲ್ಲಿ ನೀರಿನ ಪ್ರರ್ಮಾಣ ಹೆಚ್ಚಾಗುತ್ತದೆ. ಅದಕ್ಕೆ ಹೊಂದಿಕೊಂಡಂತೆ ಏರಿಯ ನಿರ್ಮಾಣವನ್ನು ಮಾಡುತ್ತಿದ್ದರು. ನೀರಿನ ಗರಿಷ್ಠಮಟ್ಟ ಕಡಿಮೆಯಾಗದಿರಲೆಂದು ಮತ್ತು ಅಲ್ಲಿ ಬೆಳೆದಿರುವ ಕಸವನ್ನು ತೆಗೆಸಿ ಗಿಡಗಳನ್ನು ಹಚ್ಚುವುದು ಒಂದು ನಿರ್ವಹಣೆಯ ಕ್ರಮವಾಗಿದೆ. ಅದೇ ರೀತಿ ಕೆರೆಗೆ ಸೂತ್ತಲೂ ತಂತಿಯ ಬೇಲಿಯನ್ನು ಹಾಕಲಾಗುತ್ತಿತ್ತು. ಇದರಿಂದ ಕೆರೆಗಳ ರಕ್ಷಣೆ ಮಾಡಲು ಸಾಧ್ಯವಾಗುತ್ತದೆ. ಉದಾಹರಣೆಗೆ: ಹಗರನೂರು ಕೆರೆಗೆ ಕಲ್ಲು ಕಂಬದ ತಂತಿಯ ಬೇಲಿಯನ್ನು ನಿರ್ಮಾಣ ಮಾಡಿರುವುದನ್ನು ಕಾಣಬಹುದು.

ಈ ತಾಲೂಕಿನಲ್ಲಿ ೨೦೧೦ ರಲ್ಲಿ ಎಲ್ಲಾ ಗ್ರಾಮಗಳಲ್ಲಿ ಸರಕಾರವು ಕಾಮಗಾರಿ ಮಾಡಿದ್ದಾರೆ ಎಂದು ಹೇಳಬಹುದು. ಅದೇರೀತಿ ಪ್ರಸ್ತುತವಾಗಿ ಕೆಲವೊಂದು ಗ್ರಾಮದಲ್ಲಿ ಕೆರೆಗಳ ಹೂಳೆತ್ತುವ ಕಾರ್ಯ ನಡೆದಿರುವುದು ಕಂಡು ಬಂದಿದೆ. ಉದಾಹರಣೆಗೆ: ಹಿರೇಹಡಗಲಿ ಕೆರೆ, ಹಗರನೂರು ಕೆರೆ, ಮುದೇನೂರು ಕೆರೆ, ಮುಂತಾದವುಗಳಲ್ಲಿ ಹೂಳೆತ್ತವು ಕಾರ್ಯ ನಡೆಡದಿದೆ ಎಂದು ಹೇಳಬಹುದು. ಅಲ್ದೆ ಸರ್ಕಾರ 'ಉದ್ಯೋಗ ಖಾತರಿ' ಯೋಜನೆಯಡಿ ತಾಲೂಕಿನ ಎಲ್ಲಾ ಕೆರೆಗಳಲ್ಲಿಯೂ ಕೆಲಸ ನಡೆಯುತ್ತಿರುವುದನ್ನು ನಾವು ಕಾಣುತ್ತೇವೆ.

ಕೆರೆಗಳ ನಿರ್ವಹಣೆಯನ್ನು ನೀರುಗಂಟಿಗಳಿಗೆ ವಂಶಪರಂಪರಿಕವಾಗಿ ರೂಢಿಯಲ್ಲಿ ಬಂದಿರುವುದು ಕಂಡು ಬಂದಿದೆ. ಆಧುನಿಕ ಕಾಲದ ಹವಾಮಾನಕ್ಕೆ ಹೋಲಿಸಿದಾಗ ಜನಸಂಖ್ಯಾಪ್ರಮಾನ ಹೆಚ್ಚಾಗುತ್ತಿದ್ದು ಜನಸಂಖ್ಯೆಗೆ ಅನುಗುಣವಾಗಿ ಆಹಾರವನ್ನು ಪೂರೈಸಲು ಅಧಿಕ ಕೃಷಿ ಉತ್ಪನ್ನ ಬೇಕಾಗಿದ್ದ ಕಾರಣ ಕೃತಕ ಜಲ ಸಂಗ್ರಾಹಕಗಳ ಅವಶ್ಯಕತೆ ತಲೆದೊರಿತು. ಅನೇಕ ಕೆರೆ, ಕುಂಟೆ, ಕಾಲುವೆ, ಏರಿ, ತೂಬು, ಕೋಡಿಯ

ನಿರ್ಮಾಣದ ಅವಶ್ಯಕತೆಯಾಯಿತು. ಕೆರೆಗಳ ನಿರ್ವಹಣೆಗೆ ನಿರ್ವಾಹಕರ ಅವಶ್ಯಕತೆ ಉಂಟಾಯಿತು. ಕೆರೆಗಳ ಮೇಲೆ ತೆರಿಗೆ ವಿಧಿಸಿ ಕೆರೆಯ ರಕ್ಷಣೆ ಮತ್ತು ನಿರ್ವಹಣಾ ಕಾರ್ಯಗಳಿಗೆ ಅವುಗಳನ್ನು ಬಳಸುತ್ತಿದ್ದರು.

ಕೆರೆಗಳ ನಿರ್ವಾಹಕರೊಂದಿಗೆ ನೀರುಗಂಟಿಗಳನ್ನು ನಿಯೋಜಿಸುತ್ತಿದ್ದರು. ಇವರ ಕಾರ್ಯ ಕೆರೆಯ ಆಯಕಟ್ಟಿನವರಿಗೆ ನೀರನ್ನು ಬೀಡುವ ಕಾರ್ಯ ಇವರದಾಗಿರುತ್ತದೆ. ಮತ್ತು ಅದನ್ನು ಸಮನಾಗಿ ಹಂಚುವುದು. ಹೂವಿನ ಹಡಗಲಿ ತಾಲೂಕಿನ ಪ್ರಮುಖ ಕೆರೆಗಳು ನದಿಯಾಶ್ರಿತ ಹಾಗೂ ಮಳೆಯಾಶ್ರಿತ ಕೆರೆಗಳಾಗಿದ್ದು, ಅವುಗಳಲ್ಲಿ ಪ್ರಮುಖವಾಗಿ ಸೋವೆನಹಳ್ಳಿ ಕೆರೆ, ಹಿರೇಮಲ್ಲನ ಕೆರೆ ಹಗರನೂರು ಕೆರೆ, ಮಾನ್ಯರ ಮಸಲವಾಡ ಕೆರೆ, ತಳಕಲ್ಲು ಕೆರೆ, ಹೊಳಗುಂದಿ ಕೆರೆ, ಹಿರೇ ಹಡಗಲಿ ಕೆರೆ, ಅರಳಹಳ್ಳಿ ಕೆರೆ ಹೀಗೆ ಹಲವು ಕೆರೆಗಳಿಗೆ ನೀರು ಕಾಲುವೆ ಮುಖಾಂತರ ಬಂದು ಸೇರುತ್ತದೆ. ನೀರುಗಂಟಿಗಳಿಗೆ ಸರಕಾರವು ಇವರ ಸೇವೆಗೆ ಪ್ರತಿಫಲವಾಗಿ ಆಯಕಟ್ಟಿನ ಉಪಯೋಗಕಾರರು. ನಿರ್ದಿಷ್ಟ ವೇತನವನ್ನು ಧನ ಹಾಗೂ ಧಾನ್ಯಗಳ ರೂಪದಲ್ಲಿ ನೀಡುತ್ತಿದ್ದರು ಎಂದು ತಿಳಿದುಬಂದಿದೆ.

**ಅಡಿ ಟಿಪ್ಪಣಿಗಳು**

೧. ಕರಣಂ ವಿರುಪಾಕ್ಷಗೌಡ., ಹೂವಿನ ಹಡಗಲಿ ತಾಲೂಕು ಸಮಗ್ರ ಶಾಸನಗಳ ಅಧ್ಯಯನ, ಪು-೨೪

೨. ಅದೇ ಪುಟ-೨೫-೨೬

೩. ಅದೇ ಪುಟ-೨೫-೨೬

೪. ಅದೇ ಪುಟ-೫೧

೫. ಅದೇ ಪುಟ-೫೫

೬. ಅದೇ ಪುಟ-೧೧೯

೭. ಕನ್ನಡ ವಿ.ವಿ. ಶಾಸನ ಸಂಪುಟ-೧(ಬಳ್ಳಾರಿ ಜಿಲ್ಲೆ) ಪುಟ-೩೫೬

೮. ಅದೇ ಪುಟ-೩೬೯

೯. ಅದೇ ಪುಟ-೪೪೦

೧೦. ಅದೇ ಪುಟ-೩೭೬

೧೧. ಅದೇ ಪುಟ-೩೧೮

೧೨. ಕಲಬುರ್ಗಿ ಎಂ.ಎಂ., ಪೂರ್ವೋಕ್ತ ಪುಟ-೫೯

೧೩. ನೀಲತ್ತಹಳ್ಳಿ ಕಸ್ತೂರಿ, ಕರ್ನಾಟಕದಲ್ಲಿ ಕೆರೆ ನೀರಾವರಿ ಪುಟ-೨೬

೧೪. ಸಿ.ಎಸ್ ವಾಸುದೇವನ್, ಹಂಪಿ ಪರಿಸರದ ಕೆರೆಗಳು ಪುಟ-೩೮

೧೫. ಅದೇ ಪುಟ-೪೦

ಅಧ್ಯಾಯ-ಐದು

# ನಂಬಿಕೆ ಮತ್ತು ಆಚರಣೆಗಳು

ಪ್ರಾಚೀನ ಮತ್ತು ಮಧ್ಯಕಾಲೀನ ಯುಗದಲ್ಲಿ ನೀರಾವರಿ ಕಾರ್ಯಗಳ ನಿರ್ಮಾಣದಲ್ಲಿ ಕೆರೆಗಳು ಆರ್ಥಿಕಾಭಿವೃದ್ಧಿಗೆ ಪೂರಕವಾದರೂ ಧಾರ್ಮಿಕ ಮಹೊನ್ನತಿಯ ಉದ್ದೇಶಗಳು ಪ್ರಧಾನವಾಗಿದ್ದವು. ಕೆರೆ ಕಾಲುವೆಗಳನ್ನು ನಿರ್ಮಿಸುವುದು, ದೇವಾಲಯಗಳನ್ನು ನಿರ್ಮಿಸುವುದು ಹಾಗೂ ಧಾರ್ಮಿಕ ಕಾರ್ಯಗಳನ್ನು ಕೈಗೊಂಡ ವ್ಯಕ್ತಿಗಳು ಪುಣ್ಯಕ್ಕೆ ಅರ್ಹರಾಗುತ್ತಾರೆ ಎಂಬ ನಂಬಿಕೆ ಪ್ರಾಚೀನ ಕಾಲದಿಂದಲೂ ಜನರಲ್ಲಿ ಬೆಳೆದು ಬಂದಿದೆ. ಹೂವಿನ ಹಡಗಲಿ ತಾಲೂಕಿನ ಕೆರೆಗಳನ್ನು ಕುರಿತಂತೆ ಕೆಲವು ನಂಬಿಕೆ ಆಚರಣೆಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

ಕೆರೆಗಳಿಗೆ ಪ್ರಾಚೀನ ಕಾಲದಿಂದಲೂ ವಿಶೇಷವಾದ ಸ್ಥಾನಮಾನ ನೀಡುತ್ತಾ ಬಂದಿದ್ದಾರೆ. ಕೆರೆಗಳ ಬಗೆಗೆ ದೇವತಾ ಮನೋಭಾವವನ್ನು ಬೆಳಸಿಕೊಂಡು ಗಂಗಾಮಾತೆಯ ಎನ್ನುವ ರೀತಿಯಲ್ಲಿ ಕೆರೆಗಳನ್ನು ಪೂಜಿಸುವ ಸಂಪ್ರದಾಯ ಅನಾದಿ ಕಾಲದಿಂದಲೂ ನಡೆಯುತ್ತಾ ಬಂದಿದೆ. ಇದೆ ಭಾರತೀಯ ಸಂಸ್ಕೃತಿಯಾಗಿದೆ. ಹಿರಿಯರು ನಡೆಸಿಕೊಂಡು ಬಂದಂತ ಸಂಪ್ರದಾಯಗಳನ್ನು, ಆಚಾರ-ವಿಚಾರಗಳನ್ನು ಮುಂದುವರೆಸಿಕೊಂಡು ಹೋಗುವುದು ಇಂದಿನ ಯುವ ಪೀಳಿಗೆಯವರಾದ ನಮ್ಮ ಕರ್ತವ್ಯವಾಗಿದೆ.

ಹೂವಿನ ಹಡಗಲಿ ಪ್ರದೇಶದ ವ್ಯಾಪ್ತಿಯಲ್ಲಿ ಮಳೆ ಬೀಳದೆ ಬರಗಾಲದ ಸಂದರ್ಭದಲ್ಲಿ ಊರಿನ ಎಲ್ಲಾ ಯುವಕರು ಒಟ್ಟಿಗೆ ಸೇರಿ ಜೇಡಿ ಮಣ್ಣಿನ ಮಳೆರಾಯನ ಮೂರ್ತಿಯನ್ನು ಮಾಡಿ ಮರದ ಹಲಗೆ ಮೇಲಿಟ್ಟು ಅರಿಶಿನ, ಕುಂಕುಮವಿಟ್ಟು ಹೂಗಳಿಂದ ಪೂಜಿಸಿ ನಂತರ ಬೆತ್ತಲೆ ಇರುವ ಓರ್ವ ಬಾಲಕನು ಮಳೆರಾಯನ ವಿಗ್ರಹವನ್ನು ತಲೆಯ ಮೇಲೆ ಹೊತ್ತುಕೊಳ್ಳುತ್ತಾನೆ. ಇವನ ಹಣೆಗೆ ಅರಿಶಿನ-ಕುಂಕುಮ ಹಚ್ಚಿ ಕೊರಳಿಗೆ ಹೂಮಾಲೆ ಹಾಕಿರುತ್ತಾರೆ. ಹುಡುಗರೆಲ್ಲರೂ ಸೇರಿಕೊಂಡು ಗ್ರಾಮದ ಪ್ರತಿ ಮನೆ ಮನೆಗೆ ತೆರಳಿ ಹಾಡನ್ನು ಹೇಳುತ್ತಾರೆ.

ಹುಯ್ಯೊ ಹುಯ್ಯೊ ಮಳ್ರಾಯ
ಹೂವಿನ ಗಿಡ್ಕೆ ನೀರಿಲ್ಲ
ಬಾರೋ ಬಾರೋ ಮಳ್ರಾಯ
ಬಾಳೆ ಗಿಡ್ಕೆ ನೀರಿಲ್ಲ
ನೀ ಬಾರಪ್ಪೋ ಮಳೆರಾಯ,
ನೀ ಬಂದುಯ್ಯೋ ಗಿಳಿರಾಮ
ದೇಸ ದೇಸಾ ನಾವ್ ತಿರುಗಿ

ಮೂರು ದಾಸವಾಳದ ಹೂ ತಂದೋ
ನೀ ಮುಡಿ ಬಾರೋ ಗಿಳಿರಾಮ
ನೀ ಬಾರಪ್ಪೋ ಮಳೆರಾಯ ನೀ ಬಂದುಯ್ಯೋ ಗಿಳಿರಾಮ.........

ಪ್ರತಿ ಮನೆಯ ಹೆಣ್ಣು ಮಕ್ಕಳು ಒಂದು ಕೊಡ ನೀರನ್ನು ಮಳೆರಾಯನ ಮೂರ್ತಿ ಹೊತ್ತ ಹುಡುಗನ ಮೇಲೆ ಸುರಿಯುತ್ತಾರೆ. ಅವನಿಗೆ ಅರಿಶಿನ ಕುಂಕುಮವಿಟ್ಟು ಪೂಜಿಸಿ ಗ್ರಾಮಕ್ಕೆ ಮಳೆ ಬರುವಂತೆ ಪ್ರಾರ್ಥಿಸುತ್ತಾರೆ. ಪ್ರತಿ ಮನೆಯವರು ದವಸ ಧಾನ್ಯ ನೀಡುತ್ತಾರೆ ಕೆಲವರು ಕಾಣಿಕೆ ನೀಡುತ್ತಾರೆ. ಊರೆಲ್ಲಾ ಪೂಜೆ ಮುಗಿದ ನಂತರ ಮಳೆರಾಯನ ಮೂರ್ತಿಯನ್ನು ಕೆರೆಯಲ್ಲಿ ವಿಸರ್ಜಿಸುತ್ತಾರೆ. ದವಸ ದಾನ್ಯಗಳನ್ನು ಮಾರಾಟ ಮಾಡಿ ಬಂದಂತಹ ಹಣದಿಂದ ಗ್ರಾಮದ ದೇವಸ್ಥಾನದಲ್ಲಿ ಪೂಜೆ ಮಾಡಿಸಿ ಪ್ರಸಾದವನ್ನು ಎಲ್ಲರಿಗೂ ಹಂಚಲಾಗುತ್ತದೆ. ಇಂತಹದ್ದು ಕೂಡ ಒಂದು ನಂಬಿಕೆ ಆ ಪ್ರದೇಶದ ಜನರಲ್ಲಿ ಬೇರೂರಿತ್ತು ಎಂದು ಕ್ಷೇತ್ರ ಅಧ್ಯಯನ ಮಾಡುವ ಸಂದರ್ಭದಲ್ಲಿ ಅಲ್ಲಿನ ಜನರಿಂದ ಬಂದ ಮಾಹಿತಿಯಾಗಿದೆ ಎಂದು ಹೇಳಲಾಗಿದೆ.

ಬರಗಾಲದ ಪರಿಸ್ಥಿತಿಯ ಗಂಭೀರತೆಯನ್ನು ಬಿಂಬಿಸುವ ಪದಗಳು ಮಳೆರಾಯನ ಮನ ಮುಟ್ಟುತ್ತವೆ ಎಂಬ ಬಲವಾದ ನಂಬಿಕೆ ಇದೆ. ಮಳೆ-ಬೆಳೆ ಬೇಸಾಯಗಾರನ ಬದುಕಿನ ಭಾಗವೆಂಬುದಕ್ಕೆ ಸಹಜವಾಗಿ ಹುಟ್ಟಿರುವ ಈ ಗಾದೆಗಳೇ ಸಾಕ್ಷಿ.

ಭರಣಿ ಮಳ್ಗೆ ಧರಣಿಯೇ ಬಾಯ್‌ಬುಡ್ತದೆ.
ಆದ್ರಿ ಮಳ್ಗೆ ಆಗಿರೋ ಉಕ್ಕೆಗೆ ಬಿತ್ಬುಡು.
ಮಿಕ್ಕೆಲ್ಲವ ಮಿಕ್ಷೇರಿಲಿ ಚೆಲ್ಲು
ಅತ್ತದ ಮಳೆ ಎತ್ತಿಂದಾದ್ರೂ ಬರ್ತದೆ.
ಚಿತ್ತೆ ಮಳೆ ಮೀನಾಡ್ದಾಂಗಾಡ್ತಾಳೆ
ಕುಲ್ಡ ಚಿತ್ತೆ ಕಣ್‌ಮುಚ್ಕಂಡ್ ಉಯ್ತದೆ
ಹಸ್ತದ ಮಳೆ ಬರ್ದಿದ್ರೆ ಹೆತ್ತೋಳೂ ಹಿಟ್ಟಾಕಲ್ಲ.
ಉತ್ತರ ಪೂರ್ವ ಸಸ್ಯನಿ, ಅಪರಸಸ್ಯನಿ ರೇವುತಿ,
ಸರ್ವನಾಷ್ಯತಿ ಅಶ್ವಿನಿ, ಭರಣಿ ಸರ್ವ ಸಸ್ಯನಿ..............

ಹಗರನೂರು ಕೆರೆಯ ಏರಿಯ ಮೇಲೆ ಇರುವ ತುಮನ್ನಪ್ಪ ದೇವರಿದ್ದು ಅದು ಒಂದು ಜಾತ್ರೆಯೂ ಕೂಡ ನಡೆಯುತ್ತದೆ. ಅದು ಅವರಿಗೆ ಒಂದು ರಕ್ಷಕ ಎಂಬ ನಂಬಿಕೆ ಇದೆ. ಪ್ರತಿದಿನ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಪ್ರತಿ ಶನಿವಾರದಂದು ವಿವಿಧ ಕಡೆಯಿಂದ ಜನರು ಆಗಮಿಸಿ ಪೂಜೆಯನ್ನು ಮಾಡಿಕೊಂಡು ಹೋಗುತ್ತಾರೆ.

ಕೆರೆಯು ಪವಿತ್ರವಾದುದೆಂಬ ಭಾವನೆಯು ಜನರಲ್ಲಿರುವುದನ್ನು ಕಾಣಬಹುದು. ಏಕೆಂದರೆ ಕೆರೆಗೆ ಪಂಚಕನ್ಯೆಯರು, ಅಪ್ಸರಾಸ್ತ್ರೀಯರು, ದೇವಾನುದೇವತೆಗಳು ಜಲವಿಹಾರಕ್ಕಾಗಿ ಆಗಮಿಸುತ್ತಾರೆಂಬ ನಂಬಿಕೆ ಇದೆ. ಹಾಗಾಗಿ ಈ ಕೆರೆಗಳ ಸುತ್ತಮುತ್ತಲಿನ ಗ್ರಾಮದೇವತೆಗಳು ಶಿವರಾತ್ರಿಯಿಂದ ಪ್ರಾರಂಭ ಮಾಡಿ ಯುಗಾದಿಯವರೆಗೆ ಗಂಗಾ ಸ್ನಾನಕ್ಕೆ ಆಗಮಿಸುತ್ತಾರೆ ಕೆಲವು ಗ್ರಾಮದ ದೇವತೆಗಳು ಶ್ರಾವಣ ಮತ್ತು ಕಾರ್ತಿಕ ಮಾಸದಲ್ಲಿ ಬರುತ್ತವೆ. ಇಲ್ಲಿಗೆ ಗ್ರಾಮದೇವತೆಗಳನ್ನು ಅರ್ಚಕ ವೃಂದ ಮತ್ತು ದೇವತೆಗಳ ಆರಾಧಕರು ಭಕ್ತಿ ಭಾವದಿಂದ ಕರೆತಂದು ಅವುಗಳಿಗೆ ಗಂಗಾಸ್ನಾನ ಮಾಡಿಸಿ, ಪೂಜಾ ಸಾಮಾಗ್ರಿಗಳನ್ನು ಮತ್ತು ಅಲಂಕರಣ ಸಾಮಾಗ್ರಿಗಳನ್ನು ಸ್ವಚ್ಛಗೊಳಿಸುತ್ತಾರೆ. ಅನಂತರ ಪುರೋಹಿತರು ದೇವತೆಗಳಿಗೆ ಪುಣ್ಯೋಜನೆ ಮಾಡಿಸಿ, ಗೋವಿನ ಗಂಜಲದಿಂದ ಶುದ್ಧೀಕರಿಸುತ್ತಾರೆ. ಕುಂಭಾಭಿಷೇಕ ಮಾಡಿ ಅಲಂಕರಣ ಮಾಡಿ ಅಭಿಷೇಕಕ್ಕೆ ಕೊನೆಯಲ್ಲಿ ಅಷ್ಟಗಂಧವನ್ನು ಬಳಸಿ, ವಿಶೇಷ ಪೂಜೆ ನೆರವೇರಿಸುತ್ತಾರೆ.

ಮದುವೆ ಸಮಾರಂಭಗಳಲ್ಲಿ, ಗೌರವ್ವನ ಹುಣ್ಣಿಮೆಯಲ್ಲಿ, ಗುಳ್ಳವ್ವನ ನಿರ್ಮಿಸುವ ಸಂದರ್ಭದಲ್ಲಿ, ಬರಗಾಲ ಸನ್ನಿವೇಶದಲ್ಲಿ ಕೆರೆಗಳನ್ನು ಪೂಜಿಸುವ ಪರಿಪಾಠ ಇಂದು ಹೂವಿನ ಹಡಗಲಿ ತಾಲೂಕಿನಲ್ಲಿ ರೂಢಿಯಲ್ಲಿದೆ. ಇದು ಒಂದು ವಿಶೇಷವಾದ ಸಂಪ್ರದಾಯವಾಗಿದೆ ಅಥವಾ ನಂಬಿಕೆಯಾಗಿರಬಹುದು ಎಂದು ಹೇಳಬಹುದು. ಅದೇ ರೀತಿಯಾಗಿ ತಾಲೂಕಿನ ಕೆಲವು ಕೆರೆಗಳಲ್ಲಿ ಮದುವೆ ಮುಂಚಿನ ದಿನ ಮನೆಯಲ್ಲಿ ದೇವರನ್ನು ಹೊಂಡಿಸುವ ಸಂದರ್ಭದಲ್ಲಿ ಮನೆಯಲ್ಲಿ ಪೂಜಾ ಕಾರ್ಯ ಮುಗಿಸಿ ಇಬ್ಬರನ್ನು ಕೆರೆಗೆ ಪೂಜಿಸಲು ಕರೆದುಕೊಂಡು ಹೋಗುತ್ತಾರೆ ಅಲ್ಲಿ ಪೂಜೆಯಾದ ನಂತರ ಮದುಮಗ ಮದುಮಗಳನ್ನು ಕೆರೆಯಿಂದ ಹೊತ್ತುಕೊಂಡು ಮೇಲಕ್ಕೆರಿ ದಡಕ್ಕೆ ತಂದು ನಿಲ್ಲಿಸುತ್ತಾನೆ ಇದೊಂದು ವಿಶೇಷವಾದ ಸಂಗತಿಯಾಗಿದೆ. ಈ ಸಂಪ್ರದಾಯ ಹೆಚ್ಚು ಕುರುಬರ ಮದುವೆಗಳಲ್ಲಿ ನಡೆಯುವುದಾಗಿದೆ.

ಇಂತಹ ನಂಬಿಕೆಗಳು ನೂರಾರು ವರ್ಷಗಳಿಂದ ಜನಪದರ ಜೀವನದಲ್ಲಿ ಹಾಸು ಹೊಕ್ಕಾಗಿ ಬಂದಿರುವ ಅವರ ಆಚಾರ ವಿಚಾರಗಳು ಇಂದು ನಗರ ಮತ್ತು ಹಳ್ಳಿಗಳಲ್ಲಿ ಪ್ರಸ್ತುತವಾಗಿ ಸಹ ಕಂಡು ಬರುತ್ತವೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ಐತಿಹಾಸಿಕವಾಗಿ ಇವುಗಳನ್ನು ಗಮನಿಸಿದರೆ ಇವು ಮಾನವನ ಪರಿಸರದಿಂದ ಅಥವಾ ಪ್ರಕೃತಿ ಮೂಲದಿಂದ ಹುಟ್ಟಿಕೊಂಡಿವೆ. ಅಂತಹ ನಂಬಿಕೆಗಳನ್ನು ಕೆಲವು ಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ ಮಾನವನ ಶರೀರ ಮತ್ತು ಸಾಮಾಜಿಕ ಸಂಬಂಧ ಮೊದಲಾದವುಗಳನ್ನು ಒಳಗೊಂಡಿರುತ್ತವೆ. ನಂಬಿಕೆಗಳು ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿವೆ. ಮಾನವರು ಪ್ರಾಣಿ, ಪಕ್ಷಿ ಮತ್ತು ಎಲ್ಲಾ ಜೀವಸಂಕುಲದ ಮೇಲೆ ನಂಬಿಕೆ ಇಟ್ಟಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟ ಕೆರೆಗಳ ಬಗ್ಗೆ ಹಲವು ನಂಬಿಕೆಗಳು ಸಹ ಕಂಡು ಬಂದಿವೆ. 'ಊರಿಗೆ ಒಂದು ಕೆರೆ ನೀರಿಗೊಂದು ಬಾವಿ' ಎಂಬಂತೆ ಪ್ರತಿ ಹಳ್ಳಿಯಲ್ಲಿ ಒಂದು ಕೆರೆ-ಬಾವಿ ಇದ್ದೆ ಇರುತ್ತವೆ. ಕೆರೆಯು ಗ್ರಾಮೀಣ

ಜನರ ಜೀವಾಳ ಮತ್ತು ಸ್ವತ್ತು ಕೂಡ ಹೌದು. ಕೆರೆಯ ಅಧಿದೇವತೆಯಾದ ಹೊನ್ನಮ್ಮ ನಮ್ಮನ್ನು ಕಾಪಾಡುತ್ತಾಳೆ ಎಂಬ ನಂಬಿಕೆ ಇದೆ ಆ ವರ್ಷ ಕೆರೆಗಳು ತುಂಬಿದರೆ ಹಳ್ಳಿಗಳಲ್ಲಿ ಸಂಭ್ರಮವೋ ಸಂಭ್ರಮ ಈ ವರ್ಷ ಸುಗ್ಗಿ ಸಮೃದ್ಧಿಯಾಗಿರುತ್ತದೆ. ಎಂಬ ಸಂಗತಿ ಕೆರೆಗಳು ತುಂಬಿದರೆ ನಮಗೆ ಬರವಿಲ್ಲ ಕೆರೆ ತುಂಬದೇ ಹೋದರೆ ನಮಗೆ ಬರಗಾಲ ಖಂಡಿತ ಎಂಬುದು ಜಾನಪದರ ನಂಬಿಕೆಯಾಗಿದೆ.

ಜನಪದರಲ್ಲಿ ಇಂತಹ ನಂಬಿಕೆ ಮತ್ತು ಆಚರಣೆಗಳು ಇದ್ದವು. ಅವುಗಳ ಸಾಹಿತ್ಯ ರೂಪವನ್ನು ಪಡೆದು ಜನಪದಗೀತೆಗಳಾಗಿ ಇಂದಿಗೂ ಉಳಿದು ಬಂದಿವೆ. ಕನ್ನಡದ ಒಂದು ಜನಪದ ಗೀತೆಯಂತೆ ಕಲ್ಲನಕೇರಿ ಮಲ್ಲನಗೌಡನೆಂಬುವನು ಒಂದು ಕೆರೆಯನ್ನು ಕಟ್ಟಿಸುತ್ತಾನೆ. ಆದರೆ ಆ ಕೆರೆಯ ಏರಿಯು ಬಲವಾಗಿ ನಿಲ್ಲದೆ ಒಡೆದುಹೋಗುತ್ತದೆ. ಪ್ರತಿ ಬಾರಿಯು ಸರಿಪಡಿಸಿದ ನಂತರವೂ ಏರಿಯು ಒಡೆಯುತ್ತಲೇ ಇರುತ್ತದೆ. ಈ ಕಾರಣದಿಂದ ಮಲ್ಲನಗೌಡನು ಒಬ್ಬ ಜೋತಿಷ್ಯನನ್ನು ಕಂಡು ಇದಕ್ಕೆ ಪರಿಹಾರವನ್ನು ಸೂಚಿಸಲು ಕೋರುತ್ತಾನೆ. ಜೋತಿಷ್ಯನು ಕೆರೆಗೆ ನರಬಲಿಯನ್ನು ನೀಡಿದ ಪಕ್ಷದಲ್ಲಿ ಈ ಕೆರೆಯ ಏರಿಯು ಭದ್ರವಾಗಿರುತ್ತದೆ ಎಂದು ತಿಳಿಸುತ್ತಾನೆ. ಈ ಕಾರ್ಯಕ್ಕೆ ಊರ ಜನರು ಮುಂದೆ ಬರುವುದಿಲ್ಲ. ಆಗ ಎಲ್ಲರ ಒಳಿತನ್ನು ಗಮನದಲ್ಲಿಟ್ಟುಕೊಂಡು ಮಲ್ಲನಗೌಡನ ಕಿರಿಯ ಸೊಸೆ ಭಾಗೀರಥಿ ಕೆರೆಗೆ ಆಹುತಿಯಾಗುತ್ತಾಳೆ. ನಂತರದಲ್ಲಿ ಕೆರೆಯ ಏರಿಯು ಭದ್ರವಾಗಿ ನಿಲ್ಲುತ್ತದೆ. ಜನರು ಆಹುತಿಯಾದ ಭಾಗೀರಥಿಗೆ ಒಂದು ಚಿಕ್ಕ ಗುಡಿಯನ್ನು ಕೆರೆಯ ಸಮೀಪದಲ್ಲಿ ಕಟ್ಟಿ ಅವಳ ಮೂರ್ತಿಯನ್ನು ಸ್ಥಾಪಿಸಿ ಪೂಜಿಸುತ್ತಾರೆ ಎಂಬುದು ಜನಪದ ಗೀತೆಯ ಸಾರವು[3].

ಹೀಗೆ ಮನೆತನದ ಗೌರವಕ್ಕೆ ಊರ ಒಳಿತಿಗೆ ಜಲಮೂಲಕ್ಕೆ ಬಲಿಯಾಗುವ ಹೆಣ್ಣನ್ನು ದೇವತೆಯಾಗಿಡುವ ಕ್ರಮದಲ್ಲಿಯೇ ಪ್ರಕೃತಿ ಮನುಷ್ಯನ ಅಸಹಜ ಅತಿಕ್ರಮಣವನ್ನು ಪ್ರತಿಭಟಿಸುವ ನೆಲೆಗಳನ್ನು ಕಾಣಬಹುದು.

**ಆಚರಣೆಗಳು**

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಅನೇಕ ಆಚರಣೆಗಳನ್ನು ಜಾನಪದರು ರೂಢಿಸಿಕೊಂಡು ಬಂದಿದ್ದಾರೆ. ಅದರಲ್ಲಿ ಈ ಕೆರೆಗೆ ಸಂಬಂಧಪಟ್ಟ ಆಚರಣೆಗಳು ಸಹ ಇಲ್ಲಿ ಮುಖ್ಯವಾಗಿ ಕಂಡು ಬರುತ್ತವೆ. ಇಂತಹ ಆಚರಣೆಗಳಲ್ಲಿ ಬಹು ಮಖ್ಯವಾಗಿ ಮಹಾನವಮಿ, ಶಿವರಾತ್ರಿ, ದೀಪಾವಳಿ, ಗಣೇಶ ಚತುರ್ಥಿ ಮುಂತಾದ ಆಚರಣೆಗಳು ರೂಢಿಯಲ್ಲಿವೆ.

'ಗಣೇಶ'ನ ಹಬ್ಬಕ್ಕೆ ತಯಾರಾಗುವ 'ಗಣೇಶ'ನ ವಿಗ್ರಹಕ್ಕೆ ಬೇಕಾದ ಜೇಡಿಮಣ್ಣು ಒದಗಿಸುವುದೇ ಕೆರೆಯಂಗಳದಿಂದ. ಒಂದೂರಿನ ಕೆರೆಯ ಜೇಡಿಮಣ್ಣಿನಿಂದ ತಯಾರಿಸಲ್ಪಟ್ಟ ಗಣೇಶ ಮತ್ತೊಂದು ಊರಲ್ಲಿ

ಪೂಜೆ ಕೈಗೊಂಡು ಆ ಊರಿನ ಕೆರೆಯಲ್ಲಿ ವಿಸರ್ಜನೆಗೊಂಡು ಮತ್ತೇ ಜೇಡಿಮಣ್ಣಾಗಿ ಪರಿವರ್ತನೆಯಾಗುತ್ತಿದ್ದ. 'ಪರ್ಜನ್ಯಜಪ' ಎಂಬ ಋಗ್ವೇದ ಉಕ್ತಿ ಜಪ ಕೊಡುವುದೇ ಕೆರೆಯ ನೀರಲ್ಲಿ ನಿಂತು ಪ್ರಾತಃ ಕಾಲದ ಸಂಧ್ಯಾವಂದನೆ ನಡೆಯುತ್ತಿದ್ದುದೇ ನದಿ ತೀರದಲ್ಲಿ ಅಥವಾ ಕೆರೆಯ ಏರಿಯ ಮೇಲೆ. ಮನುಷ್ಯನ ಅಕ್ಷರ ಕಲಿಕೆ ಶುರುವಾಗಿದ್ದೇ 'ನದಿಪಾತ್ರದ' ಅಥವಾ 'ಕೆರೆಪಾತ್ರದ' ಮರಳರಾಶಿಯಲ್ಲಿ. ತದನಂತರವೂ ಅಕ್ಷರ ತಿದ್ದಿದ ಸ್ಲೇಟ್ ತಯಾರಾದದ್ದೇ ಕೆರೆ ಅಂಗಳದ ಜೇಡಿಮಣ್ಣಿನಿಂದ, 'ಅಪರ' ಶ್ರಾದ್ಧ, ಕರ್ಮಾದಿ ಬಾಳಿನಾಚೆಯ ಉತ್ತರ ಕ್ರಿಯಾದಿಗಳು ನಡೆಯೊದೆ ನದಿ ತೀರ ಅಥವಾ ಕೆರೆಯ ಹತ್ತಿರ, ದೇವರನ್ನು ತೊಳೆಯಲು, ದೇವಸ್ಥಾನ ಅಂಗಳ ಸಾರಿಸಲು, ಸುಣ್ಣ ಬಳಿಯಲು, ದೇವಸ್ಥಾನದ ಸುತ್ತಲಿನ ದೇವರಮರ ಅಥವಾ ದೇವರವನ, ದೇವರ ಕಾಡಿಗೆ ನೀರೊದಗಿಸೋದೂ ಕೆರೆಯೇ ಆಗಿದೆ. ಎಂದ ಮೇಲೆ ಧಾರ್ಮಿಕ ವಿಧಿ–ವಿಧಾನಾಚರಣೆಯಲ್ಲಿ ಕೆರೆಯ ಔಚಿತ್ಯ ವೇದ್ಯವಾಗುತ್ತದೆ.

ತೆಪ್ಪೋತ್ಸವದಲ್ಲಿ ಪುರೋಹಿತನ ಪ್ರವೇಶವಿಲ್ಲದೆ ಎಲ್ಲಾ ಜಾತಿಯ ಜನ ಸೇರಿ ಕೆರೆಯಲ್ಲಿ ಉತ್ಸವ ನಡೆಸಿ ಸಂಭ್ರಮಿಸಲು ಕೆರೆಯೇ ಕಾರಣ. ಸಾಮಾಜಿಕ ನ್ಯಾಯದ ರೂವಾರಿ ಕೆರೆಯಾಗಿತ್ತು. ಇದೇ ಗುಂಪಿಗೆ ಸೇರುವಂತಹ ಗಂಗಮ್ಮನ ಜಾತ್ರೆ, ಕೆರೆದೇವರಿ, ಊರದೇವರ, ಬಲಿ, ನಿಂತ ಬೆಳೆಗಳ ಮೇಲೆ 'ಬಲಿರಕ್ತ' ಸಿಂಚನ, ಇವೆಲ್ಲಾ ಧಾರ್ಮಿಕ ಚಟುವಟಿಕೆಗಳೆಲ್ಲಾ ಹುಟ್ಟಿಕೊಂಡು ನೆಲೆನಿಂತಿರುವುದು ಕೆರೆಯಿಂದಾಗಿ ಅನ್ನೋದು ಸತ್ಯಕ್ಕೆ ಹತ್ತಿರವಾದ ಸಂಗತಿಯಾಗಿದೆ.

ಹೂವಿನ ಹಡಗಲಿ ತಾಲೂಕಿನಲ್ಲಿಯೂ ಸಹ ಇಂತಹ ಆಚರಣೆಗಳು ನಡೆಯುವುದು ಕಂಡು ಬಂದಿವೆ. ಹಗರನೂರು ಗ್ರಾಮದಲ್ಲಿ ಊರಿನ ಜನರು 'ತುಮುನ್ನಪ್ಪ" ದೇವರ ಜಾತ್ರೆಯನ್ನು ಬಹಳ ವಿಜೃಂಭನೆಯಿಂದ ಆಚಸುವುದನ್ನು ನಾವು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದ ಮಾಹಿತಿಯಾಗಿದೆ.

**ನರಬಲಿ**

ಜನಪದ ಬದುಕಿನಲ್ಲಿ 'ಬಲಿ'ಗೆ ಒಂದು ವಿಶಿಷ್ಟ ಸ್ಥಾನವಿದೆ. ಅದು ಅತಿಮಾನುಷ ರೀತಿಗಳಲ್ಲಿ ಒಂದು ಎಂಬುದು ಎಷ್ಟು ಸತ್ಯವೋ, ತನ್ನ ಆಸೆ ಆಕಾಂಕ್ಷೆಗಳಿಗೆ, ಭಕ್ತಿ ಗೌರವಗಳಿಗೆ ಮುಗ್ಧನೊಬ್ಬನು ಬಲಿಕೊಡುವ ರೀತಿಗಳಲ್ಲಿ ಒಂದು ಎಂಬುದು ಕೂಡ ಅಷ್ಟೇ ಸತ್ಯ. ಬಲಿಯ ಸಂದರ್ಭಗಳು ಅನೇಕ, ಉದ್ದೇಶಗಳು ಅನೇಕ, ಹಾಗೆಯೇ ರೀತಿಗಳು ಅನೇಕ. ಒಂದೊಂದು ಸಂದರ್ಭದಲ್ಲಿ ಒಂದೊಂದು ರೀತಿ ಆದರೆ ಎಲ್ಲ ಸಂದರ್ಭಗಳ ಹಿನ್ನಲೆಯಲ್ಲಿ ನಿರ್ದಿಷ್ಟ ರೂಪದ ದೃಢ ಮನಸ್ಸೊಂದು ಗೋಚರಿಸುತ್ತದೆ. ಶಿಷ್ಟ ಅಥವಾ ದುಷ್ಟ ದೇವತೆಗಳನ್ನು ಸಂಪ್ರಿತಗೊಳಿಸುವುದಾಗಲೆ, ದುಷ್ಟ ಶಕ್ತಿಗಳನ್ನು ಕೈವಶ ಮಾಡಿಕೊಂಡು ಭಯಂಕರ ಭಯದ ವಾತಾವರಣ ಸೃಷ್ಟಿಸಿ ಪರಿಸರವನ್ನು ಹತೋಟಿಯಲ್ಲಿಟ್ಟುಕೊಳ್ಳಲು ನಡೆಸುವ

ಕಾರ್ಯಕ್ರಮದ ಅಂಗವಾಗಲಿ, ಭೂಮಿಗೆ ಅಥವಾ ಬೆಳೆಗಳಿಗೆ ಕೃತಜ್ಞತೆ ತೋರಿಸುವುದಕ್ಕಾಗಲಿ, ಉದ್ದೇಶ ಯಾವುದೇ ಆಗಿದ್ದರೂ ಹಿನ್ನಲೆಯಲ್ಲಿ ಕಾಣುವುದು ಒಂದೇ ವಸ್ತು. ಅದು ಮನುಷ್ಯನ ಸ್ವಾರ್ಥ ಇದನ್ನು ಸಾಮಾಜಿಕ ಸಂದರ್ಭದಲ್ಲಿ ಹೇಳುವುದಾದರೆ ಅಪೇಕ್ಷೆ ಎನ್ನಬಹುದು.

ಹೂವಿನ ಹಡಗಲಿ ತಾಲೂಕಿನಲ್ಲಿ ಜನಪದರು ರೂಢಿಸಿಕೊಂಡು ಬಂದಿರುವ ಆಚರಣೆಗಳೆಂದರೆ ದೀಪಾವಳಿ, ಯುಗಾದಿ, ಮಹಾನವಮಿ, ಕಾರಹುಣ್ಣಿಮೆ, ಅದೇ ರೀತಿ ಮಳೆ ಬಾರದೇ ಇದ್ದಾಗ ಅಲ್ಲಿನ ಜನರು ಕಪ್ಪೆಗೆ ಮದುವೆ ಮಾಡುವುದು, ಮೆರವಣಿಗೆ ಮಾಡುವುದು, ಕತ್ತೆ ಮೆರವಣಿಗೆ ಮಾಡುವುದು ಇನ್ನು ಪುರಾಣ ಕಾರ್ಯವನ್ನು ಮುಂತಾದ ಆಚರಣೆಗಳು ಈ ತಾಲೂಕಿನಲ್ಲಿ ಇಂದಿಗೂ ರೂಢಿಯಲ್ಲಿವೆ.

**ಕತ್ತೆ ಮೆರವಣಿಗೆ**

ಹೂವಿನಹಡಗಲಿ ಪರಿಸರದ ಅನೇಕ ಗ್ರಾಮಗಳಲ್ಲಿ ಮಳೆ ಬಾರದೆ ಇದ್ದಾಗ ಆ ಊರಿನಲ್ಲಿರುವ ಕತ್ತೆಯನ್ನು ಬೇರೆ ಊರಿಗೆ ಹೋಗಿ ಅದನ್ನು ಊರಿನ ಸುತ್ತ ಮೆರವಣಿಗೆ ಮಾಡುವುದರಿಂದ ಮಳೆ ಬರುವುದು ಎಂಬ ಅಪಾರವಾದ ನಂಬಿಕೆ ಜನರಲ್ಲಿತ್ತು. ಆದ್ದರಿಂದ ಇಂತಹ ಕಾರ್ಯವನ್ನು ಮಾಡುತ್ತಿದ್ದರು ಹಾಗೂ ಈ ಆಚರಣೆಯಲ್ಲಿ ಸ್ಥಳೀಯರು ಪಾಲ್ಗೊಳ್ಳುತ್ತಿದ್ದರು. ಇಂತಹ ಒಂದು ಆಚರಣೆ ಹೂವಿನ ಹಡಗಲಿ ಪ್ರದೇಶದಲ್ಲಿ ಮಾತ್ರ ಇರದೇ ವಿವಿಧ ಪ್ರದೇಶಗಳಲ್ಲಿ ಸಹ ಈ ಒಂದು ಆಚರಣೆ ಇರುವುದು ಕಂಡುಬಂದಿದೆ.

**ನವರಾತ್ರಿ ಆಚರಣೆ:**

ನವರಾತ್ರಿ ದಿನದಂದು ಅಲ್ಲಿಯ ಜನರು ಸಕಲ ವಾದ್ಯಗಳೊಂದಿಗೆ ಮತ್ತು ಪೂಜಾ ಪರಿಕರಗಳನ್ನು ತೆಗೆದುಕೊಂಡು ಮೆರವಣಿಗೆ ಮೂಲಕ ಕೆರೆಗೆ ಹೋಗಿ ಪೂಜೆಯನ್ನು ಸಲ್ಲಿಸುವುದು ಮತ್ತು ಊರಿನ ಎಲ್ಲ ಜನರು ಕೂಡಿ ನವರಾತ್ರಿ ಹಬ್ಬವನ್ನು ಆಚರಣೆ ಮಾಡುವುದು ರೂಢಿಯಲ್ಲಿದೆ ಎಂದು ಹೇಳಬಹುದಾಗಿದೆ.

**ಗುರ್ಜಿ ಆಚರಣೆ**

ಹೂವಿನ ಹಡಗಲಿ ಪರಿಸರದಲ್ಲಿ ಬರಗಾಲ ಸಂದರ್ಭದಲ್ಲಿ ಇಲ್ಲಿನ ಮಹಿಳೆಯರು ಎಲ್ಲರೂ ಒಟ್ಟಿಗೆ ಸೇರಿ ಒಂದು ಹಂಚನ್ನು ತೆಗೆದುಕೊಂಡು ಅದಕ್ಕೆ ಸಗಣಿಯನ್ನು ಆ ಹಂಚಿನ ಮೇಲೆ ಇಟ್ಟುಕೊಂಡು ಊರಿನ ತುಂಬೆಲ್ಲಾ ತಿರುಗಾಡುತ್ತಾರೆ ಈ ಮಹಿಳೆಯರು ಇದರ ಕುರಿತು ಒಂದು ಪದ್ಯವನ್ನು ಈ ರೀತಿಯಾಗಿ ಕಟ್ಟಿದ್ದಾರೆ ಗುರ್ಜಿ ಗುರ್ಜಿ ಹಳ್ಳಾ ಕೊಳ್ಳಾ ತಿರಿಗ್ಯಾಡ ಬಂದು ಸುರಿಮಳೆ ಸುರಿಮಳೆ ಎಂಬ ಹಾಡಿನ ಮೂಲಕ ಊರಿನ ತುಂಬೆಲ್ಲಾ ಸುತ್ತಾಡಿ ಅದರಲ್ಲಿ ಬಂದಂತಹ ಸಾಮಗ್ರಗಳನ್ನು ತೆಗೆದುಕೊಂಡು ಊರಿನ ಕೆರೆ ಅಥವಾ ಹಳ್ಳದ ಸಮೀಪ ಇರುವ ದೇವಿಗೆ ಬೇಡಿಕೊಳ್ಳುತ್ತಾರೆ ಮತ್ತು ಸಾಮೂಹಿಕವಾಗಿ ಅಡುಗೆ ಮಾಡಿ ದೇವಿಗೆ ಅರ್ಪಿಸಿ ನಂತರ ಎಲ್ಲರೂ ಊಟವನ್ನು ಮಾಡುತ್ತಾರೆ. ಇಂತಹ ಆಚರಣೆ ಈ ತಾಲೂಕಿನಲ್ಲಿ ನಡೆಯುತ್ತದೆ ಎಂದು ಹೇಳಲಾಗಿದೆ.

**ಅಡಿ ಟಿಪ್ಪಣಿಗಳು**

೧. ಮಂಜುನಾಥ ಬೇವಿನ ಕಟ್ಟಿ, ನಂಬಿಕೆ ಮತ್ತು ಆಚರಣೆಗಳು ಪುಟ-೨೩

೨. ಅದೇ ಪುಟ-೧೩

೩. ಸಿ.ಎಸ್ ವಾಸುದೇವನ್ ಹಂಪಿ ಪರಿಸರದ ಕೆರೆಗಳು ಪುಟ- ೮೮-೮೯

೪. ಮಾಹಿತಿ ನೀಡಿದವರು ವಿರುಪಾಕ್ಷಪ್ಪ ಗೌಡ್ರು

೫. ಮಂಜುನಾಥ ಬೇವಿನ ಕಟ್ಟಿ, ನಂಬಿಕೆ ಮತ್ತು ಆಚರಣೆಗಳು ಪುಟ-೨೩

೬. ಕ್ಷೇತ್ರಕಾರ್ಯ ವರದಿ

# ಅಧ್ಯಾಯ – ಆರು

## ಸಮಾರೋಪ

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕು ಕರ್ನಾಟಕದ ಇನ್ನಿತರ ತಾಲೂಕುಗಳಂತೆ ಪ್ರಾಚೀನ ಕಾಲದ ಇತಿಹಾಸವನ್ನು ಹೊಂದಿದೆ. ಜನವಸತಿ ಪ್ರದೇಶವಾಗಿದ್ದ ಹೂವಿನ ಹಡಗಲಿ ತಾಲೂಕು ಪ್ರಾಗೈತಿಹಾಸಿಕ ಕಾಲದಿಂದಲೂ ಬೆಳವಣಿಗೆ ಹೊಂದಿದೆ ಎಂಬುದನ್ನು ಅಲ್ಲಿನ ನೆಲೆಗಳು ಆಯುಧಗಳು, ಕೆರೆ – ಕಟ್ಟೆಗಳು, ಬಾವಿಗಳು, ದೇವಾಲಯಗಳು ಶಾಸನಗಳ ಹಿನ್ನಲೆಯಲ್ಲಿ ಸ್ಪಷ್ಟವಾಗುತ್ತದೆ. ಆಯಾ ಕಾಲದ ಜನರು, ರಾಜರು ಕೆರೆ ಕಟಿಸುವಲ್ಲಿ ವಹಿಸಿದ ಪಾತ್ರವನ್ನು ಮತ್ತು ಸಾಮಾಜಿಕ ಸೇವೆಯ ಮನೋಭಾವವನ್ನು ಇಲ್ಲಿನ ಕೆರೆಗಳಿಂದ ತಿಳಿದುಕೊಳ್ಳಬಹುದು. ಈ ಹಿನ್ನೆಲೆಯಲ್ಲಿ ಹೂವಿನ ಹಡಗಲಿ ತಾಲೂಕಿನಲ್ಲಿ ಕಂಡುಬರುವ ಕೆರೆಗಳು ಇತಿಹಾಸದ ಕುರುಹುಗಳಾಗಿದ್ದು ಶತಮಾನಗಳ ಹಿಂದಿನ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಮಹತ್ತರ ಆಕರಗಳೂ ಆಗಿವೆ.

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ ಪ್ರಮುಖ ಕೆರೆಗಳ ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಅಲ್ಲಿ ದೊರೆತ ಮಾಹಿತಿ ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಪರಿಸರದಲ್ಲಿ ಒಟ್ಟು ನೂರೈವತ್ತು ಕೆರೆಗಳಿದ್ದು ಅವುಗಳಲ್ಲಿ ಸಣ್ಣ ಕೆರೆಗಳ ಸಂಖ್ಯೆ ೫೦ ಇದ್ದು ಅದೇ ರೀತಿ ೪೦ ದೊಡ್ಡ ಕೆರೆಗಳು ಇರುವುದು ಕಂಡುಬಂದಿದೆ. ಆ ಕೆರೆಗಳಲ್ಲಿ ಕೆಲವು ಶಾಸನೋಕ್ತ ಕೆರೆಗಳು ಇವೆ. ಇಂದು ಜನರು ಅವುಗಳನ್ನು ತಮ್ಮ ದೈನಂದಿನ ಬಳಕೆಗೆ ಉಪಯೋಗಿಸಿಕೊಳ್ಳುತ್ತಿದ್ದಾರೆ. ಇಲ್ಲಿ ದೂರೆತ ಶಾಸನದ ಮೂಲಕ ಅವುಗಳ ಪಾತ್ರ ಮಹತ್ವಗಳ ಜೊತೆಗೆ ಕೆರೆಯನ್ನು ಕಟ್ಟಿಸಿದ ಉದ್ದೇಶಗಳನ್ನು ಅರಿಯಲು ಪ್ರಯತ್ನಿಸಲಾಗಿದೆ. ಈ ತಾಲೂಕಿನಲ್ಲಿರುವ ಕೆರೆಗಳಲ್ಲಿ ಅತ್ಯಂತ ದೊಡ್ಡ ಕೆರೆ ಎಂದರೆ ಅರಳಹಳ್ಳಿಯ ಕೆರೆ ಅದು ಸುಮಾರು ೧೬೦೦ ಎಕರೆ ಜಲಾನಯನ ಪ್ರದೇಶವನ್ನು ಹೊಂದಿದ್ದರೆ, ಕಾಂತೆಬೆನ್ನೂರ ಕೆರೆ ೩ ಎಕರೆ ಜಲಾನಯನ ಪ್ರದೇಶವನ್ನು ಹೊಂದಿದ್ದು ತಾಲೂಕಿನ ಚಿಕ್ಕ ಕೆರೆಯಾಗಿದೆ. ಇಲ್ಲಿನ ಕೆಲವು ಕೆರಗಳು ಒತ್ತುವರಿ ಮಾಡಿಕೊಂಡು ಅದನ್ನು ಇಂದು ಅವುಗಳನ್ನು ಸರ್ಕಾರ ಅಳತೆಯನ್ನು ಪ್ರಾರಂಭಿಸಿರುವುದನ್ನು ನಾವು ಕಾಣುತ್ತೇವೆ. ಈ ಕೆರೆಯ ನೀರನ್ನು ಜನರು ಕುಡಿಯಲು, ದನಕರುಗಳ ಬಳಕೆಗೆ, ಮನೆಯ ಬಳಕೆಗೆ, ಮೀನುಗಾರಿಕೆಗೆ, ಪಶುಸಂಗೋಪನೆಗೆ ಹಾಗೂ ಹೊಲಗಳಿಗೆ ಈ ಕೆರೆಯ ನೀರನ್ನು ಉಪಯೋಗಿಸುತ್ತಾರೆ.

ಹೂವಿನ ಹಡಗಲಿ ಬಳ್ಳಾರಿ ಜಿಲ್ಲೆಯ ಒಂದು ತಾಲೂಕ ಕೇಂದ್ರ. ಇದು ಬಳ್ಳಾರಿ ಇಂದ ಸುಮಾರು ೧೫೫ ಕಿ.ಮಿ.ದೂರದಲ್ಲಿದೆ ಹೂವಿನಹಡಗಲಿ ಎಂಬ ಏಳಕ್ಷರಗಳೆ ಈ ಊರಿನ ಮಹಿಮೆಯನ್ನು ಪರಿಚಯಿಸುತ್ತಿವೆ. ದಕ್ಷಿಣಕ್ಕೆ ಬೆಟ್ಟದ ಮಲ್ಲೇಶ್ವರ ಬೆಟ್ಟ, ಪೂರ್ವಕ್ಕೆ ಸಿದ್ದೇಶ್ವರ ಬೆಟ್ಟ, ಪಶ್ಚಿಮಕ್ಕೆ ಹುಲಿಗುಡ್ಡ ಬೆಟ್ಟ, ಉತ್ತರಕ್ಕೆ ಕೋಟೆನ ಕಲ್ಲು ತುಂಗಭದ್ರಾ ವಿಶಾಲವಾಗಿ ಹರಿಯುತ್ತಿದ್ದಾಳೆ.

ದಖನ್ ಪ್ರಸ್ಥಭೂಮಿಯ ದಕ್ಷಿಣ ಭಾಗದಲ್ಲಿ, ಕರ್ನಾಟಕದ ಮಧ್ಯಭಾಗದ ಬಯಲು ಸೀಮೆಯಲ್ಲಿ ನೆಲೆಗೊಂಡಿರುವ ಬಳ್ಳಾರಿ ಜಿಲ್ಲೆಯ ೭ ತಾಲೂಕಗಳಲ್ಲಿ ಹೂವಿನ ಹಡಗಲಿಯು ತನ್ನದೆ ಆದ ವಿಶಿಷ್ಟತೆಯನ್ನು ಹೋಮದಿದೆ. ಜಿಲ್ಲೆಯಲ್ಲಿನ ಇತರೆ ತಾಲೂಕಗಳಿಗೆ ಹೋಲಿಸಿದಲ್ಲಿ ಹಗರಿ ಬೊಮ್ಮನಹಳ್ಳಿ ಹೊರತು ಪಡಿಸಿದರೆ ಚಿಕ್ಕ ತಾಲೂಕು ಇದು. ೭೫ ರಿಂದ ೪೦ ಡಿಗ್ರಿ ಮತ್ತು ೭೭ ರಿಂದ ೧೧ ಡಿಗ್ರಿ ರೇಖಾಂಶ ಮತ್ತು ೧೪ ರಿಂದ ೧೩ ಡಿಗ್ರಿ

ಮತ್ತು ೧೫ ರಿಂದ ೫೦ ಡಿಗ್ರಿ ಅಕ್ಷಾಂಶದ ಮಧ್ಯ ಇರುವ ಬಳ್ಳಾರಿ ಜಿಲ್ಲೆಯಲ್ಲಿ ಈ ತಾಲೂಕು ವಿಸ್ತರಿಸಿದೆ. ಸುತ್ತಲೂ ಬೆಟ್ಟ ಗುಡ್ಡಗಳು ಇವೆ. ಅಷ್ಟೊಂದು ದಟ್ಟವಿಲ್ಲದ ಅರಣ್ಯ ಪ್ರದೇಶವಿದೆ. ಉಳಿದಂತೆ ಬಯಲು ಸೀಮೆಯೇ. ಇಲ್ಲಿ ಯಾವುದೆ ಕಾರ್ಖಾನೆಗಳು ಇಲ್ಲ.

ಸಿಂಗಟಾಲೂರು ಏತ ನೀರಾವರಿಯ ತುಂಗಭದ್ರಾನದಿಯಿಂದ ನೀರು ಎತ್ತಿ ನೀರಾವರಿಗೆ ಬಳಸಲು ಯೋಜಿಸಲಾಗಿದೆ. ಹೂವಿನ ಹಡಗಲಿ ತಾಲೂಕಿನ ರಾಜವಾಳ, ಮುಂಡರಗಿ ತಾಲೂಕಿನ ಹಮ್ಮಿಗಿ ಗ್ರಾಮ ಇವುಗಳ ಮಧ್ಯ ತುಂಗಭದ್ರಾನದಿಗೆ ಅಡ್ಡಗಟ್ಟಿ ಕಟ್ಟೆ ನದಿಯ ಎರಡು ಕಡೆ ದಂಡೆಗಳಲ್ಲಿ ಪಂಪ್ ಸೆಟ್‌ಗಳನ್ನು ಅಳವಡಿಸಿ ನೀರನ್ನು ಎತ್ತರದ ಮಟ್ಟಕ್ಕೆ ಏರಿಸಿ ಅಲ್ಲಿಂದ ಕಾಲುವೆಗಳ ಮೂಲಕ ಹರಿಸಿ ಮುಂಗಾರಿನ ೪೦ ಸಾವಿರ ಎಕರೆ ಹಿಂಗಾರಿನಲ್ಲಿ ೬ ಸಾವಿರ ಎಕರೆ ಜಮೀನಿಗೆ ನೀರುಣಿಸಲು ಯೋಜಿಸಲಾಗಿದೆ. ಬಲದಂಡೆ ಭಾಗದಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕ ಮತ್ತು ಎಡದಂಡೆ ಭಾಗದಲ್ಲಿ ಗದಗ ಜಿಲ್ಲೆಯ ಮುಂಡರಗಿ ತಾಲೂಕು ಹಾಗೂ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನ ಜಮೀನಿಗೆ ನಿರಾವರಿ ಸೌಕರ್ಯ ಒದಗಲಿದೆ. ಈ ಭಾಗದ ಬಹುದಿನಗಳ ಬೇಡಿಕೆಯಾದ ಈ ಮಹತ್ವದ ಯೋಜನೆಗೆ ೧೯೯೨ ರಲ್ಲಿ ಆಡಳಿತಾತ್ಮಕ ಮಂಜೂರಾತಿ ದೊರಕಿದ್ದು ಅಂದಿನ ಎಸ್. ಎಂ. ಕೃಷ್ಣ ಅವರೆ ಶಿಲಾನ್ಯಾಸ ನೆರವೇರಿಸಿದ್ದರು. ಅಂದಿನ ಶಾಸಕರು ಹಾಗೂ ಅರಣ್ಯ ಸಚಿವರೂ ಗಿದ್ದ ಈಟಿ ಶಂಭುನಾಥ ಅವರ ಅಧಿಕಾರವಧಿಯಲ್ಲಿ ಯೋಜನೆಗೆ ಚಾಲನೆ ದೊರಕಿತು.

ಹೂವಿನ ಹಡಗಲಿ ಮೂಲತಃ ಹಾಗೂ ಪ್ರಚಲಿತವಾಗಿ ಕೃಷಿ ಮೂಲದ ತಾಲೂಕಾಗಿದೆ. ಅಂದರೆ ನಮ್ಮ ಭಾರತ ರಾಷ್ಟ್ರದ ಮೂಲ ಸ್ವಭಾವ ಹಾಗೂ ಉದ್ಯೋಗಕ್ಕೆ ಅತ್ಯಂತ ಸಾಮೀಪ್ಯತೆಯನ್ನು ಹೊಂದಿದೆ. ಪ್ರಾಚೀನ ಕಾಲದಿಂದಲೂ ಈ ಪಟ್ಟಣವು ಕೃಷಿ ಮೂಲದ, ಹೂವಿನ ಕೃಷಿಗೆ ಪ್ರಸಿದ್ಧಿ ಹೊಂದಿದ್ದರಿಂದ ಮುಂದೆ ಅದರ ಹೆಸರೆ ಹೂವಿನ ಹಡಗಲಿಯನ್ನಾಗಿ ಮಾಡಿಕೊಂಡಿದೆ. ಅಲ್ಲದೆ ಈ ತಾಲೂಕಿನ ಆರ್ಥಿಕ ಸ್ಥಿತಿಯೂ ಸಹ ಹೂವಿನ ಜೀವನಕ್ಕೆ ಸರಿಸಾಟಿಯಾಗಿ ಸಾಗಿದೆ. ಅಂದರೆ ಈ ತಾಲೂಕಿನ ಕೃಷಿಕರು ಸಾಲ-ಶೂಲ, ಕಷ್ಟ-ಕಾರ್ಪಣ್ಯಗಳಿಗೆ ಗುರಿಯಾಗುವುದು ಅನಿವಾರ್ಯವಾಗಿದೆ.

ಹೂವಿನ ಹಡಗಲಿ ಎಂಬ ಏಳಕ್ಷರಗಳೆ ಈ ಊರಿನ ಮಹಿಮೆಯನ್ನು ಪರಿಚಯಿಸುತ್ತವೆ. ಐತಿಹಾಸಿಕ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿ, ಅಲ್ಲಿಯ ಶ್ರೀ ವಿರುಪಾಕ್ಷೇಶ್ವರ ದೇವರ ಪೂಜೆಗಾಗಿ ನಿಗದಿತವಾಗಿ ತಲುಪುವಂತೆ ಈ ಹಿಂದೆ ತೆಪ್ಪಗಳಲ್ಲಿ ಅಲ್ಲಿಗೆ ಹೂವನ್ನು ಇಟ್ಟುಕಳಿಸುತ್ತಿದ್ದರಂತೆ. ಈ ಹೂಗಳು ಪೂಜಾವೇಳೆಗೆ ತಲುಪುತ್ತಿದ್ದವಂತೆ. ಅಂದಿನಿಂದ ಈ ಊರಿಗೆ ಪೊವಿನ ಪೊಡಂಗಿಲೆ ಎಂದು ನಾಮಕರಣವಾದದ್ದು ಈಗ ಹೂವಿನಹಡಗಲಿ ಎಂದು ನಿಂತಿದೆ.

ಬಿಸಿಲಿನ ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲೂಕುಗಳ ಕೊನೆಯ ಕೇಂದ್ರವಿದು. ಇಲ್ಲಿ ಫಿನಿಕ್ಸ್ ಪಕ್ಷಿಯಂತೆ ಹೂ ಬೆಳೆಯುವುದು ಇಂದೂ ನಿಂತಿಲ್ಲ. ತಲತಲಾಂತರಗಳಿಂದ ಇಲ್ಲಿ ಹೂ ಬೆಳೆಯುತ್ತಲೇ ಬರುತ್ತಿದೆ. ಇಲ್ಲಿ ಬೆಳೆದ ಹೂವುಗಳನ್ನು ದೂರದ ದೊಡ್ಡ ದೊಡ್ಡ ಪಟ್ಟಣ ಪ್ರದೇಶಗಳಾದ ಹುಬ್ಬಳ್ಳಿ, ಶಿವಮೊಗ್ಗ, ದಾವಣಗೆರೆ ಒಳಗೊಂಡಂತೆ ಇನ್ನಿತರ ಸ್ಥಾನಗಳಿಗೆ ಪ್ರತಿ ದಿನ ಸಾವಿರಾರು ಕೆ.ಜಿ. ಹೂಗಳನ್ನು ಪೊಟ್ಟಣ ಕಟ್ಟಿ ಬಂಡಲ್ ಮಾಡಿ ಬಸ್ಸು, ವ್ಯಾನುಗಳ ಮೂಲಕ ರವಾನಿಸುತ್ತಾರೆ. ಹಾಗಾಗಿ ವ್ಯಾಪಾರಿ ಬೆಳೆಯೂ ಇದಾಗಿದೆ.

ಒಂದು ಕೆರೆಯ ನಿರ್ಮಾಣ ಮಾಡಬೇಕಾದರೆ ಅವುಗಳಿಗೆ ಸಂಬಂಧಿಸಿದ ವಿಧಿವಿಧಾನವನ್ನು ಹಾಗೂ ಆ ಕೆರೆಯನ್ನು ರಕ್ಷಿಸಲೆಂದು ದೇವಸ್ಥಾನಗಳನ್ನು ನಿರ್ಮಿಸುತ್ತಿದ್ದರು. ಅದೇ ರೀತಿ ಹೂವಿನ ಹಡಗಲಿ ತಾಲೂಕಿನ ಹಗರನೂರು ಕೆರೆಯ ಏರಿಯ ಮೇಲೆ "ತುಮುನ್ನಪ್ಪ" ದೇವರ ಮೂರ್ತಿಯನ್ನು ಕಾಣಬಹುದಾಗಿದೆ. ಹಾಗೆಯೇ ಹಿರೆಮಲ್ಲನ ಕೆರೆ ಮುಂದೆ ಉಡಚಮ್ಮನ ಗುಡಿಯು ಇರುವುದು ಮತ್ತು ಅದರ ಒಳಗಡೆ ಮೂರ್ತಿಶಿಲ್ಪ ಇರುವುದು ಕಂಡು ಬಂದಿದೆ. ಇಲ್ಲಿನ ಹೆಚ್ಚಿನ ಕೆರೆಗಳ ಬಳಿ ಕಲ್ಲೇಶ್ವರ, ರಾಮಲಿಂಗೇಶ್ವರ, ಬಸವೇಶ್ವರ, ದ್ಯಾಮವ್ವನ ಗುಡಿಗಳನ್ನು ನಿರ್ಮಾಣ ಮಾಡಿರುವುದು ಗಮನಾರ್ಹ.

ಒಂದು ಸಮಾಜದ ಸಂಪೂರ್ಣ ಚಿತ್ರಣ ನಮಗೆ ದೊರಕಬೇಕಾದರೆ ಆ ಸಮಾಜದ ಆಚಾರ-ವಿಚಾರ, ಧಾರ್ಮಿಕ ನಂಬಿಕೆಗಳು, ಸಾಮಾಜಿಕ ಹಾಗೂ ಸಾಂಸ್ಕೃತಿಕ ರೀತಿಗಳು ಜೀವನ ವಿಧಾನ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳು ಮುಖ್ಯ ಕೆರೆಗಳ ಬಗ್ಗೆ ಅಧ್ಯಯನ ಮಾಡುವುದರ ಮೂಲಕ ಅಂದಿನ ಕಾಲದಲ್ಲಿನ ಜನರ ಸ್ಥಿತಿಗತಿಗಳು, ಆಚಾರ ವಿಚಾರಗಳು ವ್ಯಕ್ತಗೊಳ್ಳುತ್ತವೆ.

ಪ್ರಸ್ತುತವಾಗಿ ಕೆರೆಯ ನೀರನ್ನು ಜನರು ಇಂದು ಕುಡಿಯಲು ಉಪಯೋಗಿಸುತ್ತಾರೆ. ಬೇಸಾಯ ಮಾಡಲು, ಮೀನುಗಾರಿಕೆ ಮಾಡಲು, ಪಶುಸಂಗೋಪನೆಗೆ, ಕಟ್ಟಡ ನಿರ್ಮಾಣ ಮಾಡಲು, ಗಿಡ ಮರಗಳಿಗೆ ಕಾಲುವೆ ಮುಖಾಂತರ ಇತರ ಸಣ್ಣ ಪುಟ್ಟ ಕೆರೆಗಳಿಗೆ ಈ ನೀರನ್ನು ಹರಿಸಲಾಗುತ್ತದೆ. ಇದರಿಂದ ಇಲ್ಲಿನ ಜನರಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ನೋಡಿಕೊಳ್ಳುತ್ತಿರುತ್ತಾರೆ. ಕೆರೆಯ ನಿರ್ಮಾಣದ ಅನುಕೂಲತೆ ಇರುವುದರಿಂದ ಇಂದಿನ ದಿನಮಾನದಲ್ಲಿ ಜನರು ಸಂತೋಷದಿಂದ ಜೀವನವನ್ನು ಸಾಗಿಸುತ್ತಿದ್ದಾರೆ. ಪ್ರಾಚೀನ ಕಾಲಕ್ಕೆ ಹೋಲಿಸಿದರೆ ಇಂದು ಮಳೆಯ ಪ್ರಮಾಣ ಕಡಿಮೆಯಾಗಿದೆ. ಇದಕ್ಕೆ ಪ್ರಾಕೃತಿಕ ಅನಾನುಕೂಲ ಹಾಗೂ ಮಾನವನ ದುರಾಸೆ ಕಾರಣವಾಗಿರುವುದು ವಿಷಾದನೀಯ.

ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಕಂಡುಬಂದ ಮಾಹಿತಿ ಪ್ರಕಾರ ಈ ತಾಲೂಕು ಮಲೆನಾಡು ಪ್ರದೇಶವಾದ್ದರಿಂದ ಇಲ್ಲಿ ಪ್ರಮುಖವಾಗಿ ಈ ಪರಿಸರದಲ್ಲಿ ಅನೇಕ ಬೆಳೆಗಳನ್ನು ಬೆಳೆಯುತ್ತಿರುವುದನ್ನು ನೋಡಲಾಗಿ ಅವುಗಳಲ್ಲಿ ಪ್ರಮುಖವಾಗಿ ಇಂದು ಆಯಕಟ್ಟಿನ ಪ್ರದೇಶದ ಜನರು ತಮ್ಮ ಗದ್ದೆಗಳಲ್ಲಿ ಕೆರೆಯ ನೀರನ್ನು ಬಳಸಿಕೊಂಡು ಕೃಷಿ ಮಾಡುತ್ತಿರುವುದು ಮತ್ತು ಇಲ್ಲಿ ಮುಖ್ಯವಾಗಿ ಬೆಳೆಯಬಹುದಾದ ಬೆಳೆ ಎಂದರೆ ಹತ್ತಿ, ಗೋಧಿ, ಜೋಳ, ತೊಗರಿ, ಭತ್ತ, ಕಬ್ಬು ಹಾಗೂ ದ್ವಿದಳ ಧಾನ್ಯಗಳಾದ ಶೇಂಗ, ಕಡಲೆ, ಹೆಸರು ಮುಂತಾದ ಬೆಳೆಗಳನ್ನು

ಇಲ್ಲಿ ಬೆಳೆಯುವುದು ಕಂಡುಬಂದಿದೆ. ಈ ಎಲ್ಲ ಬೆಳೆಗಳನ್ನು ಬೆಳೆಯಲು ಇಲ್ಲಿಯ ಜನರು ಕೆರೆಗಳ ನೀರನ್ನು ಉಪಯೋಗಿಸಿಕೊಳ್ಳುತ್ತಾರೆ.

ಕೆರೆಯು ಪವಿತ್ರವಾದುದೆಂಬ ಭಾವನೆಯು ಜನರಲ್ಲಿರುವುದನ್ನು ಕಾಣಬಹುದು. ಏಕೆಂದರೆ ದೇವತೆಗಳು ಜಲವಿಹಾರಕ್ಕೆಂದು ಆಗಮಿಸುತ್ತಾರೆ ಹಾಗಾಗಿ ಕೆರೆಯ ಸುತ್ತಲೂ ಗ್ರಾಮದೇವತೆಗಳು ಶಿವರಾತ್ರಿಯಿಂದ ಪ್ರಾರಂಭ ಮಾಡಿ ಯುಗಾದಿವರೆಗೆ ಗಂಗಾ ಸ್ನಾನಕ್ಕೆ ಆಗಮಿಸುತ್ತಾರೆ ಎಂಬ ಮನೋಭಾವನೆ ಅಲ್ಲಿನ ಜನರಲ್ಲಿ ಮೂಡಿತ್ತು. ಕೆಲವು ಗ್ರಾಮದ ದೇವತೆಗಳು ಶ್ರಾವಣ ಮತ್ತು ಕಾರ್ತಿಕ ಮಾಸದಲ್ಲಿ ಬರುತ್ತವೆ. ಇಲ್ಲಿನ ಗ್ರಾಮದೇವತೆಗಳನ್ನು ಅಲ್ಲಿನ ಭಕ್ತರು ಭಕ್ತಿಯಿಂದ ಕರೆತಂದು ಅವುಗಳಿಗೆ ಗಂಗಾಸ್ನಾನ ಮಾಡಿಸಿ, ಪೂಜಾ ಸಾಮಗ್ರಿಯನ್ನು ಮತ್ತು ಅಲಂಕರಣ ಸಾಮಗ್ರಿಯನ್ನು ಸ್ವಚ್ಛಗೊಳಿಸುತ್ತಾರೆ. ಎಂಬ ನಂಬಿಕೆ ಇಲ್ಲಿನ ಜನರಲ್ಲಿ ಗಾಢವಾದ ಪ್ರಭಾವ ಬೀರಿದೆ ಎಂದು ತಿಳಿದುಬಂದಿದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹಡಗಲಿಯ ಪರಿಸರ ಅತ್ಯಂತ ಸುಸ್ಥಿತಿಯಲ್ಲಿತ್ತು. ಈ ಅವಧಿಯಲ್ಲಿ ನಿರ್ಮಾಣವಾದ ಕೆರೆಗಳು, ದೇವಾಲಯಗಳು, ಶಾಸನಗಳು ಬೇರಾವ ಕಾಲಘಟ್ಟದಲ್ಲಿಯೂ ದೊರೆತಿಲ್ಲ. ಇವರ ಕಾಲದಲ್ಲಿ ಅನೇಕ ಸಾಮಂತ ಅರಸರು ತಮ್ಮ ಚೌಕಟ್ಟಿನಲ್ಲಿಯೇ ಅದ್ಭುತವಾದ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಅನೇಕ ಪಾಳೆಗಾರರು ಸಹ ಇಲ್ಲಿನ ಆಡಳಿತದಲ್ಲಿ ಸಕ್ರೀಯವಾಗಿ ಪಾಲ್ಗೊಂಡಿದ್ದಾರೆ. ಈ ಎಲ್ಲಾ ಅಂಶಗಳನ್ನು ವಿವರವಾಗಿ, ಸಂದರ್ಭೋಚಿತವಾಗಿ ಅಧ್ಯಾಯನದಲ್ಲಿ ಚರ್ಚಿಸಲಾಗಿದೆ.

ಹಡಗಲಿ ತಾಲೂಕು ತನ್ನದೆ ಆದ ಸ್ವತಂತ್ರ ಇತಿಹಾಸವನ್ನು ಹೊಂದಿದ್ದು ಸ್ವತಂತ್ರವಾದ ಸಂಸ್ಕೃತಿ ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ಸ್ಥಾನ ಮಾನವನ್ನು ಪಡೆದುಕೊಂಡು ತನ್ನ ತನವನ್ನು ಗುರುತಿಸಿಕೊಂಡಿದೆ. ಹೂವಿನಹಡಗಲಿ ತಾಲೂಕಿನ ಕೆರೆಗಳ ಕುರಿತು ಇಲ್ಲಿಯ ವರೆಗೆ ನಡೆದಿರುವ ಕೆಲ ವಿರಳವಾದ ಅಧ್ಯಯನಗಳ ಕುರಿತು ಈ ಹಿಂದೆಯೇ ಸ್ಪಷ್ಟಪಡಿಸಲಾಗಿದೆ. ಈ ಹಿನ್ನಲೆಯಲ್ಲಿ ಈ ತಾಲೂಕಿನಲ್ಲಿ ನಿರ್ಮಿಸಲ್ಪಟ್ಟ ಕೆರೆಗಳ ಮಹತ್ವದ ಕುರಿತು ಒಂದಡೆ ಇಡಿಯಾಗಿ ಮಾಹಿತಿ ಲಭ್ಯವಾಗುವ ರೀತಿ ಮೊದಲ ಬಾರಿಗೆ ಈ ಪ್ರೌಢ ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ. ಆದಾಗ್ಯೂ ಇಲ್ಲಿನ ಕೆರೆಗಳ ಕುರಿತು ವಿವಿಧ ದೃಷ್ಟಿಕೋನಗಳಿಂದ ಮತ್ತಷ್ಟು ಅಧ್ಯಯನ ನಡೆಸುವುದಕ್ಕೆ ಹೇರಳವಾದ ಅವಕಾಶಗಳಿವೆ.

ಒಟ್ಟಾರೆಯಾಗಿ ಹೇಳುವುದಾದರೆ ಹೂವಿನ ಹಡಗಲಿ ತಾಲೂಕು ಮಲ್ಲಿಗೆ ನಾಡು ಪ್ರದೇಶವಾಗಿದ್ದು, ಇದು ಮುಂದುವರೆದ ಪ್ರದೇಶವಾಗಿದೆ . ಈ ತಾಲೂಕಿನಲ್ಲಿ ಒಟ್ಟು ೧೫೦ ಸಣ್ಣ ಹಾಗೂ ದೊಡ್ಡಕೆರೆಗಳಿದ್ದು, ಅವುಗಳ ಬಳಕೆ ಇಂದಿನ ದಿನಮಾನದಲ್ಲಿ ಅವಶ್ಯವಾಗಿದೆ. ಇಲ್ಲಿನ ಕೆರೆಯ ನೀರಿನಿಂದ ತಾಲೂಕಿನ ಜನರು ಇಂದು ಯಾವುದೇ ರೀತಿಯ ತೊಂದರೆಗೆ ಒಳಗಾಗದೇ ತಮ್ಮ ಜೀವನ ಸಾಗಿಸುವಂತಾಗಿದೆ. ಕೆರೆಗಳ ಬಳಕೆ ಇಲ್ಲದಿದ್ದರೆ ಅವರು ಬೇರೆಡೆಗೆ ನೀರಿಗಾಗಿ ಪರದಾಡಬೇಕಾಗಿತ್ತು. ಇದರಿಂದ ಇಲ್ಲಿನ ಕೆರೆಗಳು ಜನರ ಜೀವಾಳವಾಗಿವೆ. ಇದರಿಂದ ಕೆರೆಗಳು ಇಂದು ಮಹತ್ವದ ಸ್ಥಾನವನ್ನು ಪಡೆದಿವೆ ಎಂದು ಹೇಳಲಾಗಿದೆ. ಪ್ರಸ್ತುತ ದಿನಮಾನದಲ್ಲಿ ಮಳೆಯ ಪ್ರಮಾಣ ಕಡಿಮೆಯಾಗಿದ್ದರಿಂದ ಈ ಕೆರೆಗಳು ಆಧಾರವಾಗಿವೆ. ಆದ್ದರಿಂದ ಕೆರೆಗಳ ಮಹತ್ವ ಅವಶ್ಯಕವಾಗಿದೆ ಎನ್ನಬಹುದು. ಈ ಎಲ್ಲ ಮಾಹಿತಿಗಳನ್ನು ಶಾಸನ ಆಧಾರದಿಂದ ತಿಳಿದುಕೊಳ್ಳಲಾಗಿದೆ. ಇಲ್ಲಿ ಪ್ರಮುಖವಾಗಿ ಶಾಸನೋಕ್ತ ಕೆರೆಗಳಿರುವುದು ಸಹ ಕಂಡುಬಂದಿವೆ.

## ಪರಾಮರ್ಶನ ಗ್ರಂಥಗಳು

ಕಲಬುರ್ಗಿ ಎಂ.ಎಂ., ೨೦೧೦, ಮಾರ್ಗ ಸಂಪುಟಗಳು, ಸಪ್ನಾ ಬುಕ್‌ಹೌಸ್, ಬೆಂಗಳೂರು.

ಕಸ್ತೂರಿ ನೀಲತ್ತಹಳ್ಳಿ, ೨೦೦೨, 'ಕರ್ನಾಟಕದಲ್ಲಿ ಕೆರೆ ನೀರಾವರಿ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಾಸುದೇವ ಬಡಿಗೇರ., ೨೦೦೮, ಕರ್ನಾಟಕ ದೇವಾಲಯ ಕೋಶ; ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕರಣಂ ವಿರೂಪಾಕ್ಷಗೌಡ., ೨೦೧೨, ಹೂವಿನಹಡಗಲಿ ತಾಲ್ಲೂಕು ಸಮಗ್ರ ಶಾಸನಗಳ ಅಧ್ಯಯನ, ಮಮತಾ ಎಂಟರ್‌ಪ್ರೈಸಸ್, ಬೆಂಗಳೂರು.

ಕುಪ್ಪಸ್ವಾಮಿ ಜಿ.ಆರ್., ೨೦೧೧, 'ಕರ್ನಾಟಕದಲ್ಲಿ ಕೆರೆ ನೀರಾವರಿ ವ್ಯವಸ್ಥೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಟ್ರೇಶ್ ಎಂ., ೨೦೧೧, ಬಳ್ಳಾರಿ ಜಿಲ್ಲೆಯ ಕೋಟೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಟ್ರಯ್ಯ ಸಿ.ಟಿ.ಎಂ., (ಆಂಗ್ಲ ಮೂಲ), ಧೃವ ನಾರಾಯಣ(ಕ. ಅ), ೧೯೯೯, ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪ್ರಾಚ್ಯವಸ್ತುಗಳ ಸಂಗ್ರಹಾಲಯ, ಮೈಸೂರು.

ಗೋಪಾಲರಾವ್ ಎಚ್.ಎಸ್., ೧೯೯೩, 'ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು', ಪ್ರಾಚ್ಯವಸ್ತು ಮತ್ತು ಸಂಗ್ರಾಹಲಯಗಳ ನಿರ್ದೇಶನಾಲಯ, ಮೈಸೂರು.

ಚಿದಾನಂದಮೂರ್ತಿ ಎಂ., ೨೦೦೨, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಸಪ್ನಾ ಬುಕ್‌ಹೌಸ್, ಬೆಂಗಳೂರು.

ಜಯಲಕ್ಷ್ಮೀ ಸೀತಾಪುರ, ಸಿ. ಮಹದೇವ(ಸಂ), ೨೦೦೯, 'ನಂಬಿಕೆ ಮತ್ತು ಆಚರಣೆ', ತೊಣ್ಣುರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇಸಾಯಿ ಪಿ.ಬಿ., ೧೯೯೭, 'ಕನ್ನಡ ನಾಡಿನ ಶಾಸನಗಳು', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ದೇಸಾಯಿ ಪಿ.ಬಿ. ೧೯೬೮, 'ಕರ್ನಾಟಕದ ಇತಿಹಾಸ', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ನರಸಿಂಹಮೂರ್ತಿ.ಎ.ವಿ., ೨೦೧೦, 'ಕರ್ನಾಟಕದ ಸೇವುಣರ ಇತಿಹಾಸ', ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ, ಮೈಸೂರು.

ನಂದಿಮಠ ಎಸ್.ಸಿ., ೧೯೮೩, 'ಕರ್ನಾಟಕದ ಧರ್ಮಗಳು', ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ-೭೦.

ನಾಗರಾಜರಾವ್ ಎಚ್ ಎಂ., ೨೦೧೧, ಶಾಸನ ಸಂಪದ, ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು.

ನಾಗವೇಣಿ. ಎ., ೨೦೧೫, ಹೂವಿನಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಗಯ್ಯ ಜೆ.ಎಂ., ೧೯೯೨, '೬ನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ', ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ.

ನೇಗಿನಹಾಳ ಎಂ. ಬಿ., ೧೯೯೯, 'ನೇಗಿನಹಾಳ ಪ್ರಬಂಧಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪಂಚಮುಖಿ ಆರ್.ಎಸ್., ೧೯೪೬, 'ಕರ್ನಾಟಕದಲ್ಲಿ ಅರಸು ಮನೆತನಗಳು', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಬಸವರಾಜ ಕುಂಚೂರು., 'ನಮ್ಮೂರು ಕೆರೆಗಳು', ಶ್ರೀ ಚಕ್ರಪ್ರಕಾಶನ, ಕುಂಚೂರು.

ಬಡಿಗೇರ ವಿರೇಶ., ೨೦೧೦, 'ಲಾವಣಿ ಸಾಹಿತ್ಯದಲ್ಲಿ ನೀರಾವರಿ ವ್ಯವಸ್ಥೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬೆಳಗೇರ ಕೃಷ್ಣಮೂರ್ತಿ., ೨೦೧೧, 'ಬೇಸಾಯ ಮಾಡು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜುನಾಥ ಬೇವಿನಕಟ್ಟಿ, ೨೦೦೭, 'ನಂಬಿಕೆ ಮತ್ತು ಆಚರಣೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮುನಿರಾಜಪ್ಪ., ೨೦೦೯, ಕರ್ನಾಟಕ ಕೆರೆ ನೀರಾವರಿ ಅಧ್ಯಯನ, ಪ್ರಕಾಶನ, ಇತಿಹಾಸ ಮತ್ತು ಪ್ರವಾಸೋದ್ಯಮ ವಿಭಾಗ, ರೂರಲ್ ಕಾಲೇಜು, ಕನಕಪುರ.

ಮೇವುಂಡಿ ಮಲ್ಲಾರಿ., ೨೦೧೩, 'ಕನ್ನಡ ಶಾಸನ ಕವಿಗಳು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ರಾಜಾರಾಮ ಹೆಗಡೆ, ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ.

ರಾಮಚಂದ್ರರಾವ್ ಎಸ್.ಕೆ., ೧೯೮೦, 'ಭಾರತದ ದೇವಾಲಯ ನೆಲೆ-ಹಿನ್ನಲೆ', ಪ್ರಸಾರಾಂಗ, ಬೆಂಗಳೂರು.

ವಿರುಪಾಕ್ಷಗೌಡ ಕೆ., ೨೦೧೪, ಸೊಂಡುರು-ಹೊಸಪೇಟೆ ತಾಲೂಕುಗಳ ಶಾಸನಗಳ ಅಧ್ಯಯನ, ತ್ವರಿತ ಮುದ್ರಣಾಲಯ, ಗದಗ.

ವಿರೂಪಾಕ್ಷಿ ಪೂಜಾರಹಳ್ಳಿ., ೧೯೯೯, 'ಜಲಸಂಬಂಧಿ ಚಳುವಳಿಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶಂಕ್ರಪ್ಪ ಮೌನೇಶ ಬಡಿಗೇರ., ೨೦೧೫, 'ಗದಗ ಜಿಲ್ಲೆಯ ಕೆರೆ; ಬಾವಿಗಳ ಚಾರಿತ್ರಿಕ ಅಧ್ಯಯನ, ಪಿಹೆಚ್.ಡಿ ಅಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶೇಷಶಾಸ್ತ್ರೀ ಆರ್., ೧೯೮೨, 'ಕರ್ನಾಟಕದ ವೀರಗಲ್ಲುಗಳು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಸ್ವಾಮಿ ಲ.ನ, ಸಿ. ಮಹದೇವ(ಸಂ), ೨೦೦೯, 'ಕೆರೆ ಕಟ್ಟೆಗಳು', ತೋಣ್ಣುರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಾಸುದೇವನ್ ಸಿ.ಎಸ್., ೨೦೦೧, 'ಹಂಪಿ ಪರಿಸರದ ಕೆರೆಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೋಮೇಶ ಎಂ., ೨೦೧೧, 'ಡಣಾಯಕನ ಕೆರೆ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಹನುಮಂತಪ್ಪ ಬಾ ಗಾಳನಾಯ್ಕರ., ೨೦೧೭, ಕಲಘಟಗಿ ತಾಲೂಕಿನ ಕೆರೆಗಳ ಅಧ್ಯಯನ' ಎಂ.ಫಿಲ್ ಅಪ್ರಕಟಿತ ಪ್ರೌಢಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹರಿಹರ ಶ್ರೀನಿವಾಸರಾವ್., ೨೦೧೦, 'ಚಾವುಂಡರಾಯನ ಲೋಕೋಪಕಾರದಲ್ಲಿ ಜಲವಿಜ್ಞಾನ ತಂತ್ರಜ್ಞಾನ'.

ವಕ್ತೃಗಳ ವಿವರ

| ಕ್ರ. ಸಂ | ವ್ಯಕ್ತಿಯ ಹೆಸರು | ವೃತ್ತಿ | ವಯಸ್ಸು | ಗ್ರಾಮ/ನಗರ |
|---|---|---|---|---|
| ೧ | ಚಂದ್ರಶೇಖರ್.ಕೆ | ಉದ್ಯಿಮೆ | ೪೫ | ಹಿರೇಹಡಗಲಿ |
| ೨ | ಬಿ.ಟಿ. ವಾಸುದೇವ | ಎಫ್.ಡಿ.ಎ | ೪೬ | ಹೂವಿನಹಡಗಲಿ |
| ೩ | ಆರ್.ಬಿ. ಗುರುಬಸವರಾಜ | ಶಿಕ್ಷಕರು | ೪೪ | ಹೊಳಗುಂದಿ |
| ೪ | ಸೋಮಶೇಖರ್ ಯು.ಎಚ | E.O | ೩೬ | ತಾ.ಪಂ. ಹಡಗಲಿ |
| ೫ | ಕೋಟಿ ಚನ್ನಬಸವನಗೌಡ | ಕೃಷಿ | ೫೫ | ಮೈಲಾರ |
| ೬ | ಡಾ. ಕೆ. ಸತೀಶ್ | ಉಪನ್ಯಾಸಕರು | ೪೫ | ಹೂವಿನಹಡಗಲಿ |
| ೭ | ಸಣ್ಣಕೆರೆ ಚಿಂದಪ್ಪ | ಕೃಷಿ | ೯೫ | ಹಿರೇಮಲ್ಲನಕೆರೆ |
| ೮ | ಪಿ.ಕೆ ಬಸವನಗೌಡ | ನಿವೃತ್ತಿ ಶಿಕ್ಷಕರು | ೮೫ | ಮುದೇನೂರು |
| ೯ | ಮ. ಬ. ಹೊಗೆಸಪ್ಪಿನವರ | ಕೃಷಿಕ | ೫೦ | ಹೊಳಲು |
| ೧೦ | ಗಡ್ಡಿ ರಾಜಶೇಖರಪ್ಪ | ಕೃಷಿ | ೪೩ | ಮಾನ್ಯರಮಸಲವಾಡ |
| ೧೧ | ಮಂಜುನಾಥ ಅಂಚಿ | ಕೃಷಿ | ೩೩ | ಹಿರೇಮಲ್ಲನಕೆರೆ |
| ೧೨ | ಹಾಲಪ್ಪ ಕನಕಮ್ಮನವರ | ಕೃಷಿ | ೫೦ | ಹೊಳಲು |
| ೧೩ | ಕರಣಂ ವಿರುಪಾಕ್ಷಗೌಡ | ನಿವೃತ್ತ ಪ್ರಾಚಾರ್ಯರು | ೯೦ | ನವಲಿ |
| ೧೪ | ಎಚ್.ಜಿ. ಪಾಟೀಲ್ | ಶಿಕ್ಷಕರು | ೫೧ | ನಾಗತಿಬಸಾಪುರ |
| ೧೫ | ಸೋಮಶೇಖರಪ್ಪ | ಕೃಷಿಕ | ೬೧ | ನಂದಿಹಳ್ಳಿ |



ದಾಸರಹಳ್ಳಿ ಕೆರೆಯ ತೂಬು



ಹಗರನೂರಿನ ಕೆರೆಯ ತೂಬು



ಮಾನ್ಯರ ಮಸಲವಾಡದ ಕೆರೆಯ ತೂಬು



ದೇವಾಗೊಂಡನಹಳ್ಳಿ ಕೆರೆಯ ಕಾಲುವೆ



ಸೋವೆನಹಳ್ಳಿ ಕೆರೆಯ ಕಾಲುವೆ



ದಾಸರಹಳ್ಳಿ ಕೆರೆಯ ಕಾಲುವೆ



ತಳಕಲ್ ಕೆರೆಯ ಏರಿ



ನಾಗತಿಬಸಾಪುರ ಕೆರೆಯ ಏರಿ



ಮುದೇನೂರ ಕೆರೆಯ ಏರಿ



ಹಿರೇಮಲ್ಲನ ಕೆರೆಯ ಕೋಡಿ



ತಳಕಲ್ ಕೆರಯ ಕೋಡಿ



ಅರಳಹಳ್ಳಿ ಕೆರೆಯ ಕೋಡಿ



ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯ



ಹಿರೇಮಲ್ಲನಕೆರೆ ಉತ್ಸವಾಂಭ ದೇವಾಲಯ


ಹೊಳಲು ಶಾಸನ


ಕುರವತ್ತಿಯ ಶಾಸನ


ಮಾನ್ವರ ಮಸಲವಾಡ ಶಾಸನ


ಕಾಂತೆಬೆನ್ನೂರ ಶಾಸನ

